# ತಿಳಿದಿರೋಣ

(ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

ಭಾಗ -



ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ

# ! ತಿಳಿದಿರೋಣ !

## (ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

## ಭಾಗ - 3

ಅಂತರಂಗ

ಸಂಖ್ಯಾವೈಭವ - ಸಂಖ್ಯಾಶಾಸ್ತ್ರ

ಅಂಕೆಗಳ ಅಂಕಣ

ಅಂಕಣದಲ್ಲಿ ಅಂಕೆಯ ಅಧ್ಯಾತ್ಮ

ಸಂಖ್ಯೆ ಒಂದರಿಂದ ....ವಿವಿಧ ಮುಖಗಳು

ವೇದಾಂತವಾದ ಸಂಖ್ಯೆಗಳ ವಿವರ

ಹರಿಕಥಾಮೃತಸಾರೋಕ್ತ ಸಂಖ್ಯಾವಿಶೇಷ

ವಂದಿ-ಅಷ್ಟಾವಕ್ರರ ಸಂಖ್ಯಾವಿಶೇಷ

ಮಧ್ವಸಿದ್ಧಾಂತಸಾರ

ಪ್ರಮಾಣ ಪ್ರಪಂಚ

ಸಂಬಂಧಿತ ಅನೇಕ ಮಾಹಿತಿಗಳು

ಪ್ರಕಾಶನ :

ಶ್ರೀಮಾಧ್ವಗ್ರಂಥ ಪ್ರಕಾಶನ

ಬೆಂಗಳೂರು - 560 026

! ತಿಳಿದಿರೋಣ ! ಭಾಗ - 3 (ಆಧ್ಯಾತ್ಮಿಕ ವಿವಿಧ ವಿಷಯಗಳ ಸಂಗ್ರಹ)

# ಸಂಖ್ಯಾ ವೈಭವ - ಸಂಖ್ಯೆಯ ವಿವಿಧ ಮುಖಗಳನ್ನೊಳಗೊಂಡ ಸಂಖ್ಯಾಶಾಸ್ತ್ರ


ಸಂಗ್ರಹ ಹಾಗೂ ಸಂಪಾದನೆ :

-ಎ.ಬಿ. ಶ್ಯಾಮಾಚಾರ್ಯ,

B.Tech, FTC, DBM, DSQC, MA



ಮೊದಲ ಮುದ್ರಣ : 2017

ಪ್ರತಿಗಳು : 2000

ಪುಟಗಳು : 114

ಬೆಲೆ : ರೂ. 50/-

ಅಕ್ಷರ ಜೋಡಣೆ : ತುಲಸಿ ಇಂಪ್ರೆಷನ್ಸ್

ಮುದ್ರಣ : ವಾಗರ್ಥ ಮುದ್ರಣಾಲಯ

ಪ್ರಕಾಶನ :
ಶ್ರೀಮಾಧ್ವಗ್ರಂಥಪ್ರಕಾಶನ
ಬೆಂಗಳೂರು – 560 026.
ಫೋನ್ ನಂ. 080–26754221
ಮೊಬೈಲ್ : 09886764668

ಪುಸ್ತಕಗಳು ಲಭ್ಯ ಸ್ಥಳ :-
ಎ.ಎಸ್. ವಿಜಯ ಸಾರಥಿ
36, ಈಶಾವಾಸ್ಯ, 11ನೇ ಅಡ್ಡರಸ್ತೆ
17ನೇ ಮುಖ್ಯರಸ್ತೆ, ಮುನೇಶ್ವರಬ್ಲಾಕ್
ಬೆಂಗಳೂರು–560 026

# ಮೊದಲ ನುಡಿಗಳು

ಭಗವಂತನಾದ ಶ್ರೀಮನ್ನಾರಾಯಣ ಸೃಷ್ಟಿಯ ಆದಿಯಲ್ಲಿ ತನ್ನ ಉದರದಲ್ಲಿದ್ದ ತ್ರಿವಿಧ ಚೇತನರನ್ನು ನೋಡಿ ಅವರವರ ಗತಿಯನ್ನು ಕಲ್ಪಿಸಲು ಮನ ಮಾಡಿದ. ಶ್ರೀಹರಿಗೆ ಯಾವ ಪ್ರಯೋಜನವೂ ಇಲ್ಲವಾದರೂ ತನ್ನ ವಿಹಾರವೆಂದು ಸುಜೀವಿಗಳನ್ನುದ್ಧರಿಸಲು ಸೃಷ್ಟಿಗೆ ತರುವನು. ಭಗವಂತ ಮೋಕ್ಷಪ್ರದವಾದ ವಾಸುದೇವರೂಪವನ್ನು ಸ್ವೀಕರಿಸಿದ. ನಂತರ ಸಂಹಾರಕಾರಣವಾದ ಸಂಕರ್ಷಣ ರೂಪವನ್ನು, ಸೃಷ್ಟಿಕಾರಕವಾದ ಪ್ರದ್ಯುಮ್ನ ರೂಪ, ಪಾಲಕನಾಗಿ ಅನಿರುದ್ಧರೂಪವನ್ನು ತಾಳಿದ. ಈ ಐದು ರೂಪಗಳಿಂದ ಕೇಶವಾದಿ ಇಪ್ಪತ್ತು ನಾಲ್ಕು ರೂಪಗಳು, ಮತ್ಸ್ಯಾದಿ ದಶರೂಪ, ನಾರಾಯಣಾದಿ ಶತರೂಪ, ವಿಶ್ವಾದಿ ಸಹಸ್ರರೂಪ, ಪರಾದಿ ಬಹುರೂಪ, ಅಜಾದಿ ಅನಂತರೂಪಗಳನ್ನು ಸ್ವೀಕರಿಸಿದ. ಸರ್ವತಂತ್ರ ಸ್ವತಂತ್ರನಾದ ಮಹಾವಿಷ್ಣುವು ಹೀಗೆ ನಿರ್ದಿಷ್ಟ ಸಂಖ್ಯೆಯಲ್ಲಿ ರೂಪಗಳನ್ನು ಸ್ವೀಕರಿಸಿ ತನ್ನ ಮಹಾತ್ಮ್ಯೆಯನ್ನು ಪ್ರಕಟಿಸಿದ. ಒಂದರಿಂದ ಅನಂತ ಸಂಖ್ಯೆಯ ರೂಪಗಳ ಹೆಚ್ಚಳ ಅಂದರೆ ಬ್ರಹ್ಮಾಂಡದ ವಿಸ್ತಾರ. ಇದು ಭಗವಂತನಿಂದ ಎಂಬುದೆ ಸೃಷ್ಟಿಯ ರಹಸ್ಯ.

ಬ್ರಹ್ಮಾಂಡದಲ್ಲಿ ಏಕ (ಒಂದು) ಎಂದು ಆಗಮಗಳಿಂದ ಗುರುತಿಸಿಕೊಂಡವನು ಭಗವಂತ. ಸಂಖ್ಯಶಬ್ದ ವಾಚ್ಯನಾದವನು ಶ್ರೀಹರಿ. ಜಗತ್ತೇ ಸಂಖ್ಯಾ ಸೂಚಕ ಅಲ್ಲದೆ ಪ್ರತಿಪಾದಕ. ಸಂಖ್ಯೆಯಿಂದ ಗುರುತಿಸಲಾಗದ್ದು ಎಂಬುದು ಯಾವುದೂ ಇಲ್ಲ. ಹೀಗಾಗಿ ಎಲ್ಲ ಸಂಖ್ಯೆಗಳು ಅಂದರೆ ಅಂಕೆಗಳು ಮುಖ್ಯತಃ ಭಗವದ್ವಾಚಕಗಳು. ವ್ಯವಹಾರದಲ್ಲಿ ಅನೇಕ ತೆರನಾಗಿದೆ. **'ಏಕತ್ವಾದಿ ವ್ಯವಹಾರ ಹೇತುಃ ಸಂಖ್ಯಾ'** ಒಂದು-ಎರಡು ಮೊದಲಾದ ವ್ಯವಹಾರ ಕಾರಣವಾದುದೇ ಸಂಖ್ಯೆ. ವಸ್ತುಗಳ ನಿರ್ದಿಷ್ಟ ಸಂಕೇತಗಳಾಗಿವೆ. ಇದು ನಿತ್ಯ-ಅನಿತ್ಯವೆಂದು ಎರಡು ವಿಧ. ಅಪೇಕ್ಷೆಯಿಂದ ಹುಟ್ಟಿದ ಸಂಖ್ಯೆಗಳು ಅನಿತ್ಯವಾದರೆ, ನಿತ್ಯದಲ್ಲಿರುವವು ನಿತ್ಯ. ಸಂಖ್ಯೆಗೂ ಸಂಖ್ಯಾನಿರ್ದೇಶಕ ಪದಾರ್ಥಕ್ಕೂ ಭೇದವಿದೆ. ಸಂಖ್ಯೆ ಎಂಬುದು ಅನುಗತ ಧರ್ಮ. ಪದಾರ್ಥದಂತೆ ಸಂಖ್ಯೆಯೂ ಅನಂತ. ದ್ರವ್ಯಗತವಾದ ಗುಣಲಕ್ಷಣವನ್ನು ಗುರುತಿಸುವುದು ಸಂಖ್ಯೆಯಾಗಿದೆ. ಈ ಸಂಖ್ಯಾ ಶಾಸ್ತ್ರವನ್ನು ಅಧ್ಯಾತ್ಮ ಎಂದು ಕರೆದರು. **ಸಂಖ್ಯಾ - ಸಾಂಖ್ಯ** ಎಂದರೆ ಜ್ಞಾನ. ಸಂಖ್ಯೆಯ ಮೂಲಕ ಪಡೆಯಬಹುದಾದ ಜ್ಞಾನವೂ ಹೌದು. **'ಶುದ್ಧಾತ್ಮ ತತ್ತ್ವವಿಜ್ಞಾನಂ**

**ಸಾಂಖ್ಯಮಿತ್ಯಭೀಧೀಯತೇ'** –ವ್ಯಾಸಸ್ಮೃತಿ. ದೋಷರಹಿತವಾದ, ಶುದ್ಧವಾದ ಪರಮಾತ್ಮನ ತತ್ತ್ವಜ್ಞಾನವೆ ಸಾಂಖ್ಯವೆಂದೆನಿಸಿದೆ. ಅಂಕೆಗೆ ಹಾಗೂ ಅಧ್ಯಾತ್ಮಕ್ಕೆ ಇರುವ ಸಂಬಂಧ ಅವಿನಾಭಾವ ಸಂಬಂಧ. ಶ್ರೀಕೃಷ್ಣ ವೇದಾಂತವು ಸಂಖ್ಯಾ ಮೂಲಕವಾಗಿ ಇರುವುದನ್ನು ಸಾಂಖ್ಯವೆಂದು ಕರೆದ. ಇದನ್ನು ಗುರುತಿಸಿ ಈ ಅಧ್ಯಾತ್ಮವನ್ನು ಮೊದಲಿಗೆ ಬಿಚ್ಚಿಟ್ಟವರು ಶ್ರೀಮದಾನಂದತೀರ್ಥರು. ಹೀಗಾಗಿ ಸಂಖ್ಯೆಗಳಿಂದ ತಿಳಿಸಲ್ಪಡುವ ವಿಷಯಗಳು, ಪ್ರತಿಪಾದಿಸುವ ಪ್ರಮೇಯಗಳು, ಅನೇಕ ರಹಸ್ಯಗಳು ಆಗಮಗಳಲ್ಲಿ ಆಮೂಲಾಗ್ರವಾಗಿದ್ದು ಸಾಂಖ್ಯಶಾಸ್ತ್ರವೆಂದೆನಿಸಿದೆ. 'ಸಂಖ್ಯಾ' ಎಂಬುದು ಖ್ಯಾಪ್ರಖಿತನೇ ಎಂಬ ಧಾತುವಿನಿಂದ ನಿಷ್ಪನ್ನವಾದದ್ದು. ಚನ್ನಾಗಿ ಖಿತನವಾದದ್ದು. ಸಮ್ಯಕ್ ಆಗಿಯೂ ಇರುವಂತಹದ್ದು. ಈ ಸಂಖ್ಯೆಯು ನಿಗದಿತವಾಗಿ ಇಷ್ಟು – ಅಷ್ಟು ಎಂಬುದರ ಸೂಚಕ. ವೇದಾಂತದ ಮೂಲ ಹೇತುವಾಗಿದೆ. ಒಂದರಿಂದ ಅನಂತವಾಗಿ – ಅನಂತ ಆಕಾರ ವಿಕಾರಗಳನ್ನು ಪಡೆದ ಈ ಜಗತ್ತು ಹರಡುತ್ತ **'ಬಹುಚಿತ್ರ ಜಗತ್ ಬಹುದಾಕರಣಾತ್....'** ಎಂದು ಆಚಾರ್ಯ ಮಧ್ವರು ಅಂದಂತೆ ಸಂಖ್ಯಾ ಅದ್ಭುತತ್ತ್ವವು ಭಗವಂತನ ಪಾರಮ್ಯದ್ಯೋತಕವಾಗಿದೆ.

ಸಂಖ್ಯೆಯಲ್ಲಿ ಅಡಗಿರುವ ತತ್ತ್ವಗಳ ಪರಿಗಣನೆಯನ್ನು ಮೊದಲಬಾರಿಗೆ ತೋರಿಸಿಕೊಟ್ಟು ಅನೇಕ ರೀತಿಯಲ್ಲಿ ನಿರೂಪಿಸಿದ ಮಹಾತ್ಮರು ಶ್ರೀಮದಾಚಾರ್ಯರು ಎಂಬುದನ್ನು ಜಗತ್ತು ಮರೆಯುವಂತಿಲ್ಲ. ಸಂಖ್ಯೆಯಲ್ಲಿ ಅಧ್ಯಾತ್ಮವನ್ನು ತೋರಿಸಿಕೊಟ್ಟರು. ಅಂಕಿ–ಅಂಶಗಳನ್ನು ವಿವಿಧ ಮುಖಗಳಿಂದ ನಿರೂಪಿಸಿರುವ ಶಾಸ್ತ್ರವಾಗಿ ಸಂಖ್ಯಾ ಶಾಸ್ತ್ರವೆನಿಸಿದೆ. ಎಲ್ಲ ಶಾಸ್ತ್ರಗಳಲ್ಲೂ ಸಂಖ್ಯೆಯ ಅಂಶಗಳು ಹಾಸುಹೊಕ್ಕಾಗಿ ಹಬ್ಬಿವೆ. ವಿಶೇಷವಾಗಿ ಜ್ಯೋತಿಷ್ಯ ಶಾಸ್ತ್ರದಲ್ಲಿ ಕಾಣಬಹುದು. ಈ ಕಿರುಪುಸ್ತಕದಲ್ಲಿ ಅನೇಕ ವಿಷಯಗಳ ಸಂಗ್ರಹವನ್ನು ಕಾಣಬಹುದು. ಇದೊಂದು ಪ್ರಯತ್ನವೆಂದು ತಿಳಿಸ ಬಯಸುವೆ. ಇದು ಕೇವಲ ದಿಗ್ದರ್ಶನವೆಂದು ತಿಳಿಯಬೇಕು. ಸಾಂಖ್ಯಶಾಸ್ತ್ರದ ಪ್ರವರ್ತಕರು ಕಪಿಲಮಹರ್ಷಿ. **'ಸಮ್ಯಕ್ ಖ್ಯಾತಿಃ ಸಂಖ್ಯಾ'** ಚೆನ್ನಾಗಿ ಜ್ಞಾನವನ್ನು ಕೊಡುವುದು ಸಂಖ್ಯಾ. ಸುಲಭದಿ, ನಿರ್ದಿಷ್ಟರೂಪದಲ್ಲಿ, ಜ್ಞಾಪಕದಲ್ಲಿಡಲು ಸುಲಭವಾದ ಈ ಸಂಖ್ಯಾ ನಿರ್ದೇಶನ ಮಾನವ ಕುಲಕ್ಕೆ ಸಿಕ್ಕ ಅದ್ಭುತ ನಿಧಿ. ಕೆಲ ನಿದರ್ಶನಗಳನ್ನು ಈ ಪುಸ್ತಕದಲ್ಲಿ ಕಾಣಬಹುದು. ಇಷ್ಟೆ ಎಂದು ಯಾರೂ ತಿಳಿಯಬಾರದೆಂದು ವಿನಮ್ರ ಪ್ರಾರ್ಥನೆಯಿದೆ. ಸಂಖ್ಯೆಗಳ ಮೂಲಕ ವಿಷಯ ನಿರೂಪಣೆಯನ್ನು ವಿಪುಲವಾಗಿ ವೇದವೇದಾಂತ ಇತಿಹಾಸ ಪುರಾಣಗಳುದ್ದಕ್ಕೂ ಕಾಣಬಹುದು. ವ್ಯಾಸ ಸಾಹಿತ್ಯದಲ್ಲಿದ್ದಂತೆ ಹರಿದಾಸ ಸಾಹಿತ್ಯದಲ್ಲೂ ಅನೇಕರೀತಿಯಲ್ಲಿ ಬಂದಿರುವುದು ನಮಗೆ

ಸಿಕ್ಕ ಭಾಗ್ಯ. ವಿಶೇಷವಾಗಿ ಹರಿಕಥಾಮೃತಸಾರದಲ್ಲಿ ಈ ಸಂಖ್ಯಾ ನಿರೂಪಣೆಯು ವೈಶಿಷ್ಟ್ಯ ಪೂರ್ಣವಾಗಿ ನಿರೂಪಿಸಿಲ್ಪಟ್ಟಿದೆ. (ಕೆಲವನ್ನು ಕಡೆಯಲ್ಲಿ ಕೊಡಲಾಗಿದೆ) ಇದು ಎಲ್ಲ ವರ್ಗದವರಿಗೂ ಮಾರ್ಗದರ್ಶನವಾಗಿದೆ.

**ತಿಳಿದಿರೋಣ-ಭಾಗ 3** ಈ ಕೃತಿಯು ಹಿಂದಿನ ಎರಡು ಭಾಗಗಳಿಂದಲೂ ವಿಭಿನ್ನವಾಗಿದೆ. ಈ ಭಾಗವನ್ನು **'ಸಂಖ್ಯಾವಿನೋದ'** ಎಂದು ಕರೆಯಬಹುದು. ಇಲ್ಲಿ ಒಂದೊಂದು ಅಂಕೆಯ ಶೀರ್ಷಿಕೆಯಲ್ಲಿ ಆಧ್ಯಾತ್ಮಕ್ಕೆ ಸಂಬಂಧಸಿದ ವೇದಾಂತದಲ್ಲಿ ಅಡಕವಾದ ವಿಷಯಗಳ ಸಂಗ್ರಹ ಕಾಣಬಹುದು. ನನ್ನ ಮಿತ ಮತಿಗೆ ತಿಳಿದಷ್ಟನ್ನು ಮಾತ್ರ ಕೊಡಲಾಗಿದೆ ಎಂದು ವಿನಮ್ರದಿ ತಿಳಿಸ ಬಯಸುವೆ. ಈ ಕೃತಿಯನ್ನು ಸಿದ್ಧಪಡಿಸುವಲ್ಲಿ ಅನೇಕ ಆಕರ ಗ್ರಂಥಗಳನ್ನು, ಅಂದರೆ ಮೂಲಮಹಾಭಾರತದ ವಿದುರ ನೀತಿ, ವಂದಿ-ಅಷ್ಟಾವಕ್ರರ ಸಂವಾದ, ಭಾಗವತದಲ್ಲಿ ಬಂದ ಕೆಲನಿರೂಪಣೆಗಳು, ಪುರಾಣ ಗಳಲ್ಲಿಯ ಕೆಲಸಂಖ್ಯಾ ವಿವರಗಳು, ಸರ್ವಮೂಲಗ್ರಂಥಗಳಲ್ಲಿಯ ಸಂಬಂಧಿಸಿದ ಸಂಖ್ಯಾ ವಿವರ, ಧರ್ಮ-ನೀತಿ ಶಾಸ್ತ್ರಗಳಲ್ಲಿಯ ಸಂಬಂಧಿತ ವಿಷಯ ಹರಿದಾಸ ಸಾಹಿತ್ಯದಲ್ಲಿಯ ಕನಕ-ವಿಜಯದಾಸರ ಮುಂಡಿಗೆಗಳು, ಹೀಗೆ ಅನೇಕ ಸಂಖ್ಯಾ ವಿಷಯಗಳು ಹಲವಾರು ಆಕರಗ್ರಂಥಗಳಿಂದ ಸಂಗ್ರಹಿಸಿಲಾಗಿದೆ. ಇಷ್ಟೆ ಅಲ್ಲದೆ ಮಧ್ವಸಿದ್ಧಾಂತಸಾರ, ವಿಶೇಷವಾಗಿ ಹರಿಕಥಾಮೃತಸಾರಗ್ರಂಥಗತ ಸಂಖ್ಯಾವೈಭವವನ್ನೂ ವೈಭವೀಕರಿಸಲಾಗಿದೆ. ಪ್ರಮಾಣಗಳ ನಿರೂಪಣೆ ವಿಸ್ತಾರವಾಗಿ ಬಂದಿದೆ. ಅನೇಕರ ಕೃತಿಗಳನ್ನು, ಅನೇಕ ಲೇಖನಗಳನ್ನು ನೋಡಿರುವೆ. ಅವುಗಳಲ್ಲಿಯ ಬೇಕಾದ ವಿಷಯ ಗಳನೂ ಸಂಗ್ರಹಿಸಲಾಗಿದೆ. ಕೊಡಲಾಗದಷ್ಟು ಪಟ್ಟಿ ಇದೆ. ಆ ಎಲ್ಲ ಮಹನೀಯರಿಗೂ ಈ ಮೂಲಕ ಕೃತಜ್ಞತೆಗಳನ್ನು ತಿಳಿಸುವೆ. ಈ ಗ್ರಂಥವನ್ನು ಆಮೂಲಾಗ್ರವಾಗಿ ನೋಡಿ ಕೆಲಸೂಚನೆಯನ್ನು ನೀಡಿದವರು ನನ್ನ ಆಪ್ತಮಿತ್ರರಾದ ಡಾ॥ ವೇದಗರ್ಭ ಶೇಷಗಿರಿ ಆಚಾರ್ಯರು. ನನ್ನ ಎಲ್ಲ ಕಾರ್ಯಗಳಿಗೂ ಸದಾ ಪ್ರೋತ್ಸಾಹನೀಡುವ ಸಹೃದಯಿ. ಇವರಿಗೆ ಹೃತ್ಪೂರ್ವಕ ಧನ್ಯವಾದಗಳು.

ಸುಜನ ವಿಧೇಯ

**-ಎ.ಬಿ.ಶ್ಯಾಮಾಚಾರ್ಯ**

# ತಿಳಿದಿರೋಣ ಭಾಗ- 3 ಓದುವ ಮುನ್ನ

ಅಧ್ಯಾತ್ಮ ಎಂಬುದು ಒಂದರ್ಥದಲ್ಲಿ ಆತ್ಮ, ಬ್ರಹ್ಮ, ಜೀವ, ದೇಹ, ಇಂದ್ರಿಯ, ಮನಸ್ಸು ಎಂದಾಗಿದೆ. ಭಗವಂತನನ್ನು ತಿಳಿಸುವ ಜ್ಞಾನವು ಅಧ್ಯಾತ್ಮಜ್ಞಾನ. ಈ ಅಧ್ಯಾತ್ಮ ಜ್ಞಾನದಲ್ಲಿ ಸಂಖ್ಯಾ ಶಾಸ್ತ್ರವೂ ಒಂದಾಗಿದೆ. ಅಂದರೆ ಸಂಖ್ಯೆಯಲ್ಲಿ ಅಧ್ಯಾತ್ಮವನ್ನು ತಿಳಿದುಕೊಳ್ಳುವುದು. ಜಗತ್ತಿನಲ್ಲಿ ಸಂಖ್ಯಾ ಸೂಚಕವಲ್ಲದ್ದೆಂಬುದಿಲ್ಲ. ಒಂದರಿಂದ ಅನಂತ ...ಸಂಖ್ಯೆಯ ಪ್ರತಿಸಂಖ್ಯೆಯೂ ಮುಖ್ಯಾರ್ಥದಲ್ಲಿ ಭಗತ್ಪ್ರತಿಪಾದಕ. ವ್ಯಾವಹಾರಿಕವಾಗಿ ತಿಳಿಯಲು ಈ ಪುಸ್ತಕದಲ್ಲಿ ಸಂಖ್ಯೆಯ ರೂಪದಲ್ಲಿ ಅಡಗಿರುವ ವಿವಿಧ ಮುಖಗಳ ಅನಾವರಣ ಮಾಡಲಾಗಿದೆ. ಓದುವ ಮುನ್ನ ಕೆಲ ಸಂಗತಿಗಳನ್ನು ತಮ್ಮ ಮುಂದೆ ಇಡಬಯಸುವೆ.

- ಸಂಖ್ಯೆಯ ರೂಪದಲ್ಲಿ ಅಡಗಿರುವ ವಿಷಯನಿರೂಪಣೆಯ ದಿಗ್ದರ್ಶನ ಇಲ್ಲಿದೆ.
- ಪ್ರಮೇಯಗಳ ವಿಷಯದಲ್ಲಿ ಇಂತಿಷ್ಟು ಸಂಖ್ಯಾಕವೆಂದು ತಿಳಿಸಲಾಗಿದೆ. ಆದರೆ ಕೆಲವು ಕಡೆ ವಿವಿಕ್ಷಾ ಭೇದದಿಂದ ತಿಳಿಸಿದೆಂದು ತಿಳಿಯಬೇಕು.
- ಸಂಖ್ಯೆಗೆ ಪ್ರಾಧಾನ್ಯತೆ ನೀಡಿದೆ ಹೊರೆತು ಯಾವ ಕ್ರಮವನ್ನು ಅನುಸರಿಸಿರುವುದಿಲ್ಲ.
- ಅಧ್ಯಾತ್ಮ ಸಂಬಂಧಿತ ವಿಷಯಗಳ ಬಗ್ಗೆ ಮಾತ್ರ ಸಂಖ್ಯಾನಿರೂಪಣೆ ಬಂದಿದೆ. ಇತರ ವಿಷಯಗಳ ಪ್ರಸ್ತಾಪ ಇಲ್ಲಿ ಇರುವುದಿಲ್ಲ.
- ಇಲ್ಲಿ ನಿರೂಪಿಸಲ್ಪಟ್ಟ ಸಂಗ್ರಹಿಸಿದ ವಿಷಯಗಳು ಇಷ್ಟೇ ಎಂದು ತಿಳಿಯಬಾರದು.
- ಅತಿ ಹೆಚ್ಚಿನ ಸಂಖ್ಯೆಯ ವಿಷಯಗಳನ್ನು ಇಲ್ಲಿ ಕೊಟ್ಟಿಲ್ಲ.
- ಇನ್ನೂ ಅನೇಕ ವಿಷಯಗಳ ಸಂಖ್ಯಾವಿಭಾಗಗಳನ್ನು ತಿಳಿದಿರೋಣ ಭಾಗ - 1 ರಲ್ಲಿ ನೋಡಬಹುದು.
- ಜೀವನದ ಶೈಲಿಯನ್ನು ರೂಪಿಸಿಕೊಳ್ಳಲೆಂದು ಸಂಬಂಧಿತ ವಿಷಯಗಳನ್ನು ಕೊಡಲಾಗಿದೆ.

ಸಂಖ್ಯೆಗಳ ಮೂಲಕ ವಿಷಯಗಳ ನಿರೂಪಣೆ ನೆನಪಿನಲ್ಲಿಡುವುದು ಸುಲಭ. ಸಂಗ್ರಹಯೋಗ್ಯವಾಗಿ ಮತ್ತೆ ಮತ್ತೆ ಮೆಲಕು ಹಾಕಲು ಸುಲಭ ಶೈಲಿಯಾಗಿದೆ. ಈ ಸಂಖ್ಯಾಶಾಸ್ತ್ರ ಎಂತಹವರನ್ನೂ ಕುತೂಹಲಕಾರಿಯನ್ನಾಗಿಸಬಲ್ಲದು. ಇದರಿಂದ ಪರಿಣಾಮ ಕಂಡಲ್ಲಿ, ಅನುಭವಕ್ಕೆ ವೇದ್ಯವಾದಲ್ಲಿ, ಪ್ರಮೇಯಗಳು ತಿಳಿದಲ್ಲಿ ನನ್ನ ಪ್ರಯತ್ನವು ಸಾಫಲ್ಯ ಕಂಡೀತು. ನಿಜಕ್ಕೂ ಧನ್ಯನೆಂದು ಭಾವಿಸುವೆ.

- ಸಂಪಾದಕ

# ಕೃತಜ್ಞತೆಗಳು

**ದಿ॥ ಶ್ರೀವಾಸುದೇವರಾವ್, ತುಮಕೂರು**

ಇವರ ಸ್ಮರಣಾರ್ಥವಾಗಿ ಇವರ ಪುತ್ರರಾದ

**ಶ್ರೀಟಿ.ವಿ. ಗುರುನಾಥರಾವ್** ಅವರು ಈ ಕೃತಿ ಕುಸುಮ

**ತಿಳಿದಿರೋಣ ಭಾಗ-3ಕ್ಕೆ**

ಶ್ರದ್ಧಾಭಕ್ತಿಯಿಂದ ಧನಸಹಾಯವನ್ನು ಮಾಡಿ ಸಹಕರಿಸಿರುವರು.

ಇವರಿಗೆ ಇವರ ಕುಟುಂಬದವರಿಗೂ ಶ್ರೀಹರಿವಾಯು ಗುರುಗಳು ಜ್ಞಾನಭಕ್ತ್ಯಾದಿ, ಆಯುರಾರೋಗ್ಯಾದಿಗಳನ್ನು ಕೊಟ್ಟು ಅನುಗ್ರಹಿಸಲೆಂದು ಪ್ರಾರ್ಥಿಸುವೆವು.

**-ಸಂಪಾದಕ.**

ವಿ.ಸೂ. : ತಿಳಿದಿರೋಣ ಭಾಗ-4 ಮತ್ತು ತಿಳಿದಿರೋಣ ಭಾಗ-5 ಆದಷ್ಟು ಬೇಗನೆ ಬರಲಿದೆ.

# ವಿಷಯಾನುಕ್ರಮಣಿಕಾ

# ಸಂಖ್ಯಾವೈಭವ
# (ಸಂಖ್ಯೆಯ ವಿವಿಧ ಮುಖಗಳು)

## ಒಂದರ ವೈಭವ

ಒಂದು - ಇದೊಂದು ಅದ್ಭುತ. ಎಲ್ಲಕ್ಕೂ ಮೊದಲು ಇದ್ದದ್ದು ಒಂದೇ. ಕಡೆಗೆ ಉಳಿಯುವುದೂ ಒಂದೇ. ಅದನ್ನೇ ಆಗಮಗಳು 'ಏಕಮೇವಾದ್ವಿತೀಯಂ ಬ್ರಹ್ಮ' ಎಂದು ಸಾರಿದವು. ಈ ವಸ್ತುವೇ ಅದ್ವೈತ. ಮತ್ತೊಂದು ಸರಿಸಾಟಿ ಇಲ್ಲದ್ದು. ಆದರ ಎಲ್ಲವೂ ಅದೇ ಆದದ್ದು. ಅದನ್ನೇ ಬ್ರಹ್ಮ ಎಂದು ಕರೆದಿದೆ. ಈ ಒಂದು - ಒಂದಂಕಿಯಲ್ಲಿರುವ ಅಧ್ಯಾತ್ಮ. ಈ ಒಂದರಲ್ಲಿ ಎಲ್ಲವೂ ಅಡಗಿದೆ. ಎಲ್ಲದರಲ್ಲೂ ಸ್ವತಂತ್ರವಾಗಿರುವುದೂ ಇದೊಂದೇ. ಅಂದರೆ ಈ ಒಂದು ಅನಂತರೂಪ ಉಳ್ಳದ್ದಾಗಿ ಅನಂತಾನಂತ ವಸ್ತುಗಳಲ್ಲಿ ಆವರಿಸಿಕೊಂಡಿದೆ. ಈ ಬ್ರಹ್ಮವನ್ನು ಶ್ರೀಮದಾಚಾರ್ಯರು 'ಬ್ರಹ್ಮ ಶಬ್ದಶ್ಚ ವಿಷ್ಣಾವೇವ' ಎಂದು ಪ್ರಮಾಣಗಳ ಪೂರ್ವಕ ವ್ಯಾಖ್ಯಾನಿಸಿದರು. ಈ ಮಹಾವಿಷ್ಣುವೇ ಸಕಲ ವೇದಸಾರವೆನಿಸಿದ ಏಕಾಕ್ಷರ ಓಂಕಾರದ ವ್ಯಾಖ್ಯಾನ. ಇವನೇ ಸರ್ವೋತ್ತಮನಾದ ಸಕಲ ಗುಣಪೂರ್ಣನಾಗಿ, ಸಮಸ್ತ ದೋಷವರ್ಜಿತನಾದ ಶ್ರೀಮನ್ನಾರಾಯಣ. ಹೀಗೆ ಭಗವಂತ ಇತರ ವ್ಯಕ್ತಿ - ವಿಷಯಗಳಿಗೂ ಯಥಾಯೋಗ್ಯ ಪ್ರಾಧಾನ್ಯತೆ ಕೊಡಲೆಂದು ಅನುಗ್ರಹಿಸಿ ಮೊದಲ ಸ್ಥಾನಗಳಲ್ಲಿ ಇರಿಸಿರುವ. ಒಂದಂಕೆಯ ವೈಭವದ ಕೆಲ ವಿಷಯಗಳ ಬಗ್ಗೆ ನೋಡುವ ಪ್ರಯತ್ನ ಇಲ್ಲಿದೆ.

| | | |
|---|---|---|
| ಸಕಲ ವೇದಸಾರ | : | ಓಂ |
| ಅ - ಬ್ರಹ್ಮ | : | ಮಹಾವಿಷ್ಣು |
| ಸೃಷ್ಟಿಗೆ ಮುನ್ನಿದ್ದ ಒಂದು | : | ಬ್ರಹ್ಮ (ಏಕಮೇವಾದ್ವಿತೀಯಂ) |
| ವೇದಗಳ ಮಹಾತಾತ್ಪರ್ಯ | : | ವಿಷ್ಣು ಸರ್ವೋತ್ತಮತ್ವ ಪ್ರತಿಪಾದನೆ |
| ಸರ್ವೋತ್ತಮ | : | ಶ್ರೀಮಹಾವಿಷ್ಣು |
| ಸರ್ವಸ್ವತಂತ್ರ | : | ಶ್ರೀಮಹಾವಿಷ್ಣು |
| ಬ್ರಹ್ಮಶಬ್ದವಾಚ್ಯ | : | ಶ್ರೀಮನ್ನಾರಾಯಣ (ವಿಷ್ಣು) |
| ಜೀವೋತ್ತಮ | : | ಶ್ರೀ ವಾಯುದೇವರು (ಪರಾರ್ಧ) |
| ಅಕ್ಷರಪುರುಷಳು | : | ಮಹಾಲಕ್ಷ್ಮೀ (ಪರಾರ್ಧಿ) |
| ಪುರುಷೋತ್ತಮ | : | ಶ್ರೀಕೃಷ್ಣ (ನಾರಾಯಣ) |

| | | |
|---|---|---|
| ಜಗತ್ತಿನ ಬಿಂಬ | : | ಶ್ರೀಮನ್ನಾರಾಯಣ |
| ಪುರಾಣರಾಜ | : | ಶ್ರೀಮದ್ಭಾಗವತ |
| ಇತಿಹಾಸರಾಜ (ಸರ್ವಶ್ರೇಷ್ಠಶಾಸ್ತ್ರ) | : | ಮಹಾಭಾರತ |
| ಪರಮಪ್ರಮಾಣ ಗ್ರಂಥ | : | ವೇದ (ಅಪೌರುಷೇಯ) |
| ಅದ್ವೈತ ಎನ್ನಿಸಿದವನು | : | ಶ್ರೀಹರಿ |
| ಸಮಾಸಮಳು | : | ಮಹಾಲಕ್ಷ್ಮೀ (ದಕ್ಷಿಣ) |
| ಪವಿತ್ರತಮವಸ್ತು | : | ಜ್ಞಾನ (ನ ಹಿ ಜ್ಞಾನೇನ ಸದೃಶಂ) |
| ಪರಮಪುರುಷಾರ್ಥ | : | ಭಗವಂತನ ಅತ್ಯರ್ಥಪ್ರಸಾದ (ಮೋಕ್ಷಕ್ಕೆ) |
| ಪರಮಮುಖ್ಯ ಸಾಧನ | : | ಭಕ್ತಿ |
| ಪರಮಮುಖ್ಯ ಗುರಿ | : | ಸಂಸಾರದಿಂದ ಬಿಡುಗಡೆ – ಮೋಕ್ಷ |
| ಪರಮ ಪುರುಷ | : | ನಾರಾಯಣ |
| ಸರ್ವಕಲ್ಯಾಣ ಸದ್ಗುಣಗಳಿಂದ ಪೂರ್ಣ | : | ನಾರಾಯಣ |
| ಸಮಸ್ತದೋಷದೂರ | : | ನಾರಾಯಣ |
| ಸರ್ವಾಂತರ್ಯಾಮಿ | : | ಮಹಾವಿಷ್ಣು |
| ಪೂರ್ಣಮದಃ ಪೂರ್ಣಮಿದಂ | : | ಪರಬ್ರಹ್ಮ ಶ್ರೀಹರಿ |
| ಜ್ಞಾನಾನಂದಾತ್ಮಕ ದೇಹವುಳ್ಳವನು | : | ಶ್ರೀಹರಿ |
| ಮೋಕ್ಷಾರ್ಥ | : | ನಾರಾಯಣ |
| ನಾಶರಹಿತ | : | ಶ್ರೀಮನ್ನಾರಾಯಣ |
| ಪರಮಶ್ರೇಯಸ್ಕರ | : | ಧರ್ಮ |
| ಮಾನಸಿಕ ತೃಪ್ತಿದಾಯಕ | : | ವಿದ್ಯೆ |
| ಶಾಂತಿ ಸ್ಥಾಪನೋಪಾಯ | : | ಕ್ಷಮಾಗುಣ |
| ಪರಮಸುಖದಾಯಕ | : | ಅಹಿಂಸಾ |
| ಶ್ರೇಷ್ಠ ದಿನ | : | ಹರಿದಿನ (ಏಕಾದಶೀ) |

| | | |
|---|---|---|
| ಶ್ರೇಷ್ಠವಾರ | : | ರವಿವಾರ |
| ಶ್ರೇಷ್ಠಮಾಸ | : | ಮಾರ್ಗಶೀರ್ಷ |
| ಶ್ರೇಷ್ಠರಸ | : | ಭಕ್ತಿರಸ |
| ಭಗವಂತನನ್ನು ತಿಳಿಯಲು | : | ಮನುಷ್ಯಜನ್ಮ |
| ದುಃಖರಹಿತ ಸ್ಥಾನ | : | ವೈಕುಂಠ |
| ಸುಖರಹಿತ ಸ್ಥಾನ | : | ಅಂದನ್ತಮಸ್ಸು |
| ಸರ್ವಭೂತಾಂತರಾತ್ಮ | : | ಶ್ರೀಹರಿ |
| ಸರ್ವಶಬ್ದವಾಚ್ಯ | : | ಶ್ರೀಮನ್ನಾರಾಯಣ |
| ಸರ್ವವ್ಯಾಪ್ತ | : | ಮಹಾವಿಷ್ಣು |
| ಲಕ್ಷ್ಮೀಬ್ರಹ್ಮರುದ್ರಾದಿದೇವವಂದ್ಯ | : | ಮಹಾವಿಷ್ಣು |
| ಸೃಷ್ಟ್ಯಾದಿ ಅಷ್ಟಕರ್ತ | : | ಶ್ರೀಮನ್ನಾರಾಯಣ |
| ಜೀವ ಜಡಗಳಿಂದ ಭಿನ್ನನಾದವನು | : | ಶ್ರೀಹರಿ |
| ಸಮುದಿತ ವ್ಯಾಹೃತಿ | : | ಭೂರ್ಭುವಃ ಸ್ವಃ (ಓಂ) |
| ಭಗವದ್ದರ್ಶನಕ್ಕೆ | : | ಸತತ ಶಾಸ್ತ್ರಾವಮರ್ಶನ |
| ವಾಯು-ಲಕ್ಷ್ಮೀ-ವಿಷ್ಣು | : | ಶ್ರೇಷ್ಠ-ಶ್ರೇಷ್ಠತರ-ಶ್ರೇಷ್ಠತಮ |
| ವಾಯು-ಲಕ್ಷ್ಮೀ-ವಿಷ್ಣು | : | ಪರಮ-ಪರಾರ್ಧಿ-ಪರಾರ್ಧ್ಯ |
| ವಾಯು-ಲಕ್ಷ್ಮೀ-ವಿಷ್ಣು | : | ರಸ-ರಸತರ-ರಸತಮ |

ವರ್ಣಾತ್ಮಕ-ಧ್ವನ್ಯಾತ್ಮಕ ಸಕಲ ಶಬ್ದಗಳಿಂದ ವಾಚ್ಯ-ಪ್ರತಿಪಾದ್ಯ-ಗೇಯ-ವ್ಯಾಖ್ಯೇಯನಾದ ಮಹಾವಿಷ್ಣುವಿನ ವಿಶಿಷ್ಟನಾಮಗಳು

ಓಂ-ಅ-ಅಕ್ಷರ-ಉದ್ಗೀಥ-ಪರಾರ್ಧ್ಯ-ಕತಮ-ನಾರಾಯಣ-ಪುರುಷೋತ್ತಮ ..... ಮುಂ ||

ಮುಖ್ಯಪ್ರಾಣರೂ(ವಾಯು) ಭಗವಂತನ ನಂತರ ಸರ್ವೋತ್ತಮ, ಸರ್ವಶಬ್ದವಾಚ್ಯ, ಮೂಲಾಧಿಷ್ಠಾನ, ಅಖಿಣಾಶ್ಮಸಮ, ಮುಖ್ಯಪ್ರತಿಬಿಂಬ .....ಮುಂ||

ಅನಂತಮಜರಂ ನಿತ್ಯಂ ಅಜಮಕ್ಷರಮಚ್ಯುತಮ್ ।<br>
ಅನಂತಶಕ್ತಿಂ ಸರ್ವಜ್ಞಂ ನಮಸ್ಯೇ ಪುರುಷೋತ್ತಮಮ್ ॥ -ಶ್ರೀಮದಾಚಾರ್ಯರು.

# ಎರಡರ ವೈಭವ

ದ್ವೈತ ಭಾವವೆ ಒಂದಲ್ಲ ಎರಡೆಂಬುದು. ಸೃಷ್ಟಿಯ ಆದಿಯಲ್ಲಿದ್ದದ್ದು ಎರಡು. ಅವು ಸರ್ವೋತ್ತಮನಾದ ಶ್ರೀಮನ್ನಾರಾಯಣ ಮತ್ತು ಸಮಾಸಮಳೆನಿಸಿದ ಮಹಾಲಕ್ಷ್ಮೀ. ಇವರು ನಿತ್ಯಮುಕ್ತರು. ಮಹಾವಿಷ್ಣು ತನ್ನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನನ್ನೂ ಸೃಷ್ಟಿಸಿ ಎರಡೆನಿಸಕೊಂಡ. ಸೃಷ್ಟಿಗೆ ಬೇಕೆನಿಸಿದ ಗಂಡು ಹಾಗೂ ಹೆಣ್ಣು ಎರಡು. ಬ್ರಹ್ಮಾಂಡದಲ್ಲಿ ದ್ವಿಮುಖವಾದವೆಲ್ಲವೂ ಎರಡು ಸಂಖ್ಯಾಕವಾಗಿದೆ. ಸ್ವತಂತ್ರ - ಅಸ್ವತಂತ್ರ, ಭಾವ-ಅಭಾವ, ಚೇತನ-ಅಚೇತನ, ಸುಖ-ದುಃಖ, ಪಾಪ - ಪುಣ್ಯ, ಜ್ಞಾನ - ಅಜ್ಞಾನ, ಯಥಾರ್ಥ - ಅಯತಾರ್ಥ, ಪೌರುಷೇಯ - ಅಪೌರುಷೇಯ, ಪ್ರಮಾಣ - ಅಪ್ರಮಾಣ, ಯೋಗ್ಯ - ಅಯೋಗ್ಯ ಹೀಗೆ ಅನೇಕಾನೇಕ. ವಿಶ್ವದಲ್ಲಿ ಭೇದ ಪ್ರತಿಪಾದಕ ಸಂಖ್ಯೆ ಎರಡು. ಈಶ ಹಾಗೂ ಜೀವರಲ್ಲಿ ಕಾಣುವ ದ್ವೈತವು ಶಾಶ್ವತ ಹಾಗೂ ಅಭಾದಿತ. ಹೀಗೆಯೇ ಜೀವ -ಜಡರಲ್ಲಿ, ಕ್ಷರ - ಅಕ್ಷರ ಪುರುಷರು ಪುರುಷೋತ್ತಮನ ಅನುಚರರು. ಸಂಖ್ಯೆ ಎರಡರ ವೈಭವವನ್ನು ಅನೇಕ ತೆರನಾಗಿ ಕಾಣುವ ಪ್ರಯತ್ನ ಇಲ್ಲಿದೆ.

| | | |
|---|---|---|
| ಪುರುಷರು | : | ಕ್ಷರ ಪುರುಷರು, ಅಕ್ಷರ ಪುರುಷ. |
| ಭಗವದ್ರೂಪಗಳು | : | ಜೀವಾಂತಸ್ಥರೂಪ, ಬಹಿಸ್ಥಿತ ರೂಪ. |
| ನಿತ್ಯ ಮುಕ್ತರು | : | ಶ್ರೀಮನ್ನಾರಾಯಣ, ಮಹಾಲಕ್ಷ್ಮೀ |
| ಜೀವರು | : | ಸಾಂಶರು, ನಿರಂಶರು/ ಸೃಜ್ಯ, ಅಸೃಜ್ಯ |
| ಜೀವರು | : | ಸ್ವರೂಪಾಂಶರು, ವಿಭಿನ್ನಾಂಶರು. |
| ತತ್ತ್ವಗಳು | : | ಸ್ವತಂತ್ರ, ಅಸ್ವತಂತ್ರ ; ಭಾವ, ಅಭಾವ; ಚೇತನ, ಅಚೇತನ. |
| ಫಲ | : | ಸುಖ, ದುಃಖ / ಶುಭ, ಅಶುಭ, ಮಂಗಳ, ಅಮಂಗಳ / ಲಾಭ, ಅಲಾಭ/ಸ್ಥಿತಿ, ನಾಶ/ ಪುಣ್ಯ ಪಾಪ. ಮುಂ॥ |
| ವಿದ್ಯಾ | : | ಪರ, ಅಪರ |
| ಶಬ್ದ | : | ವರ್ಣಾತ್ಮಕ, ಧ್ವನ್ಯಾತ್ಮಕ. |
| ವಸ್ತುಗಳು | : | ಚರ, ಅಚರ,/ನಿತ್ಯ, ಅನಿತ್ಯ . |
| ಪಕ್ಷಗಳು | : | ಶುಕ್ಲ, ಕೃಷ್ಣ |
| ಆಯನ | : | ಉತ್ತರ, ದಕ್ಷಿಣ/ಚಂದ್ರ, ಸೂರ್ಯ. |
| ದ್ವಾಸುಪರ್ಣ | : | ಜೀವ, ಈಶ. |
| ಮುಕ್ತಿ | : | ಸಾಮಾನ್ಯ (ಅಪರೋಕ್ಷಜ್ಞಾನ), ಸಾಕ್ಷಾತ್ (ಲಿಂಗಭಂಗ) |

| | | |
|---|---|---|
| ಶ್ರೀಹರಿಯಾಜ್ಞೆ | : | ಶ್ರುತಿ, ಸ್ಮೃತಿಗಳು |
| ಪ್ರಮೇಯಗಳು | : | ಪರಪ್ರಮೇಯ (ಬ್ರಹ್ಮತತ್ತ್ವ), ಅಪರಪ್ರಮೇಯ (ಜಗತ್ತು) |
| ಸಂಸ್ಕಾರಗಳು | : | ಬ್ರಾಹ್ಮ, ದೈವ |
| ಅಶ್ವಿನಿದೇವತೆಗಳು | : | ನಾಸತ್ಯ-ದಸ್ರ / ವಿವಿದ-ಮೈಂದವ/ ನಕುಲ-ಸಹದೇವ. |
| ಆಚ್ಛಾದಿಕಗಳು | : | ಜೀವಾಚ್ಛಾದಿಕ, ಪರಮಾಚ್ಛಾದಿಕ. |
| ಕಾಯ (ದೇಹ) | : | ಲಿಂಗದೇಹ, ಸ್ಥೂಲದೇಹ. |
| ದೀಕ್ಷೆಗಳು | : | ಅಂತರ, ಬಾಹ್ಯ. |
| ಧನದ ದುರುಪಯೋಗ | : | ಅಪಾತ್ರದಾನ, ಸತ್ಪಾತ್ರರಿಗೆ ಕೊಡದಿರುವುದು. |
| ದುರಾತ್ಮರು | : | ದಾನಮಾಡದ ಧನಿಕ, ಕಷ್ಟಪಡದ ದರಿದ್ರ. |
| ಶರೀರತಾಪಗಳು | : | ಅಸಮರ್ಥನಾಗಿ ಕೋಪಿಯಾದಲ್ಲಿ, ದರಿದ್ರನಾಗಿ ದುರಾಶೆ ಇದ್ದಲ್ಲಿ |
| ಖ್ಯಾತಿ ಪಡೆಯಲು | : | ಕಠಿಣ ಮಾತನಾಡದಿರುವುದು, ದುಷ್ಟರನ್ನು ಆದರಿಸದಿರುವುದು. |
| ಶೋಭಿಸರು | : | ಕರ್ಮವಿಹೀನ ಗೃಹಸ್ಥ, ಲೌಕಿಕ ವ್ಯವಹಾರದ ಸಂನ್ಯಾಸಿ. |
| ಜ್ಞಾನ | : | ವೃತ್ತಿಜ್ಞಾನ, ಜ್ಞಪ್ತಿಜ್ಞಾನ. |
| ಬ್ರಾಹ್ಮಣರ ಕಣ್ಣು | : | ಶ್ರುತಿ, ಸ್ಮೃತಿ |
| ಉನ್ನತಿ ಪಡೆಯದವರು | : | ಕ್ಷಮಾಗುಣವಿಲ್ಲದ ಬಲಿಷ್ಠ, ದಾನಶೀಲನಾದ ದರಿದ್ರ. |
| ಪ್ರಮಾಣಗಳು | : | ಕೇವಲ ಪ್ರಮಾಣ, ಅನುಪ್ರಮಾಣ. |
| ಅನುಮಾನ | : | ಸಾಧನಾನುಮಾನ, ದೂಷಣಾಮನುಮಾನ |
| ಅನುಮಾನ | : | ಸ್ವಾರ್ಥ, ಪರಾರ್ಥ |
| ಅಪರೋಕ್ಷ | : | ಸ್ವರೂಪಾಪರೋಕ್ಷ, ಬಾಹ್ಯಾಪರೋಕ್ಷ. |
| ಆಗಮಗಳು | : | ಪೌರುಷೇಯ, ಅಪೌರುಷೇಯ. |
| ಇಂದ್ರಿಯಗಳು | : | ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು. |
| ಜ್ಞಾನ (ವಿದ್ಯಾ) | : | ವಿದ್ಯಾ, ಅವಿದ್ಯಾ. |
| ವಿದ್ಯೆಗಳು | : | ಪರವಿದ್ಯೆ (ಅಲೌಕಿಕ), ಅಪರವಿದ್ಯೆ (ಲೌಕಿಕ). |
| ಸಖ್ಯಾವಿಧಗಳು | : | ನಿತ್ಯ, ಅನಿತ್ಯ |
| ಜೈನರ ವಿಭಾಗ | : | ಶ್ವೇತಾಂಬರ, ದಿಗಂಬರ. |

| | | |
|---|---|---|
| ಮೀಮಾಂಸಾದರ್ಶನ | : | ಪೂರ್ವಮೀಮಾಂಸಾ, ಉತ್ತರ ಮೀಮಾಂಸಾ. |
| ಇಂದ್ರಿಯಗಳು | : | ಪ್ರಮಾತೃವಿನ ಸ್ವರೂಪಭೂತ, ಪ್ರಾಕೃತ |
| ಜಗತ್ತು | : | ನಿತ್ಯ, ಅನಿತ್ಯ,/ಪರಮನಿತ್ಯ, ಪರಮಅನಿತ್ಯ |
| ಸಾಧನದ ಫಲ | : | ಶ್ರೇಯಸ್ಸು ಪ್ರೇಯಸ್ಸು |
| ಕರ್ಮಗಳು | : | ನಿವೃತ್ತಕರ್ಮ, ಪ್ರವೃತ್ತಕರ್ಮ / ನಿಷ್ಕಾಮ ಕರ್ಮ, ಸಕಾಮಕರ್ಮ /ಪ್ರಾರಬ್ಧ ಅಪ್ರಾರಬ್ಧ / ನಿತ್ಯಕರ್ಮ, ನೈಮಿತ್ತಿಕ ಕರ್ಮ/ಅನಾದಿ ಕರ್ಮ, ಸಾದಿಕರ್ಮ |
| ಮಾರ್ಗಗಳು | : | ಜ್ಞಾನಮಾರ್ಗ, ಕರ್ಮಮಾರ್ಗ/ಗರುಡಮಾರ್ಗ, ಶೇಷಮಾರ್ಗ. |
| ಸೃಷ್ಟಿ | : | ಸರ್ಗ, ಅನುಸರ್ಗ. |
| ಕಲ್ಪ | : | ಮಹಾಕಲ್ಪ ಪಾದ್ಮಕಲ್ಪ |
| ಬ್ರಹ್ಮಕಲ್ಪಃ | : | ದಿನಕಲ್ಪ ಮನುಕಲ್ಪ |
| ಪ್ರಲಯಃ | : | ಮಹಾಪ್ರಲಯ, ಅವಾಂತರ ಪ್ರಲಯ |
| ಅವಾಂತರಪ್ರಲಯ | : | ದೈನಂದಿನ ಪ್ರಲಯ, ಮನುಪ್ರಲಯ |
| ಕರ್ಮದ ವಿಧ | : | ಸಬೀಜ (ಪುಣ್ಯಬೀಜ, ಪಾಪಬೀಜ)<br>ನಿರ್ಬೀಜ (ಜ್ಞಾತಫಲ, ಅಜ್ಞಾತಫಲ). |
| ಕರ್ಮದ ಪ್ರಕಾರ | : | ಸುಖಕ್ಕೆ ಕಾರಣ (ಧರ್ಮ), ದುಃಖಕ್ಕೆ ಕಾರಣ (ಅಧರ್ಮ). |
| ಭಗವಂತನ ರೂಪಗಳು | : | ಪುರುಷ ರೂಪ, ಸ್ತ್ರೀರೂಪ. |
| ಆಲಂಬನರು | : | ಪ್ರತೀಕಾಲಂಬನರು, ಅಪ್ರತೀಕಾಲಂಬನರು. |
| ದೇಹಗತ ದೇವತೆಗಳು | : | ಸೂಕ್ಷ್ಮಾಭಿಮಾನಿಗಳು, ಸ್ಥೂಲಾಭಿಮಾನಿಗಳು. |
| ಗಂಧರ್ವರು | : | ದೇವಗಂಧರ್ವರು, ಮನುಷ್ಯಗಂಧರ್ವರು |
| ಅಮೃತಮಯವಾದವು | : | ಸುಭಾಷಿತ, ಸಜ್ಜನ ಸಹವಾಸ |
| ವಾಯುವಿನಗುಣ | : | ಶಬ್ದ ಸ್ಪರ್ಶ. |
| ವಿದ್ಯೆಗಳು | : | ಅಲೌಕಿಕ, ಲೌಕಿಕ (ಪರಮಾತ್ಮ ಬೋಧಕ, ಕರ್ಮ ಬೋಧಕ). |
| ಪದಾರ್ಥಗಳು | : | ಭಾವಪದಾರ್ಥ, ಅಭಾವಪದಾರ್ಥ. |
| ಪ್ರತ್ಯಕ್ಷ | : | ಪ್ರಾಕೃತ, ಶುದ್ಧ ಚೈತನ್ಯ |
| ಕರ್ಮಗಳು | : | ಸಾಧುಕರ್ಮ (ಸಜ್ಜನರ), ಅಸಾಧುಕರ್ಮ (ಅಸಜ್ಜನರ). |

| | | |
|---|---|---|
| ವಾಕ್ಯವೃತ್ತಿ | : | ನಿರವಕಾಶ, ಸಾವಕಾಶ |
| ಲಕ್ಷಣ | : | ರೂಢ (ಪ್ರಯೋಜನರಹಿತ), ನಿರೂಢ (ಪ್ರಯೋಜನಸಹಿತ) |
| ಸಾಙ್ಖ್ಯರು | : | ಸೇಶ್ವರಸಾಂಖ್ಯರು (ಈಶ್ವರಕರ್ತಾ), ನಿರೀಶ್ವರಸಾಂಖ್ಯರು (ಜಡಕರ್ತಾ, ಜೀವಕರ್ತಾ). |
| ಇಂದ್ರಿಯಗಳು | : | ನಿತ್ಯ (ಸೂಕ್ಷ್ಮರೂಪದಲ್ಲಿ), ಅನಿತ್ಯ (ಪ್ರಾಕೃತ). |
| ಆತ್ಮಗಳು | : | ಪರಮಾತ್ಮ, ಜೀವಾತ್ಮ. |
| ಗೋಳಗಳು | : | ಪೂರ್ವಾರ್ಧ, ಪಶ್ಚಿಮಾರ್ಧ. |
| ಧ್ರುವಗಳು | : | ಉತ್ತರಧೃವ, ದಕ್ಷಿಣಧೃವ |
| ಶಕ್ತಿಗಳು | : | ಸುರ(ಶಿಷ್ಟ), ಅಸುರ (ದುಷ್ಟ). |
| ಪ್ರತಿಜ್ಞಾವಿರೋಧ | : | ಪ್ರಮಾಣ ವಿರೋಧ, ಸ್ವವಚನ ವಿರೋಧ |
| ಹೇತು ವಿರೋಧ | : | ಅಸಿದ್ಧಿ , ಅವ್ಯಾಪ್ತಿ |
| ದೃಷ್ಟಾಂತ ವಿರೋಧ | : | ಸಾಧ್ಯವೈಕಲ್ಯ, ಸಾಧನ ವೈಕಲ್ಯ |
| ಸಾಲಿಗ್ರಾಮ | : | ಜಲಜ, ಶೈಲಜ |
| ಭ್ರಾಂತಿ ಕಾರಣ | : | ಕಾಮ, ಕ್ರೋಧಾದಿ |
| ಬುದ್ಧಿಪ್ರಕಾರ | : | ತತ್ತ್ವರೂಪ, ಜ್ಞಾನರೂಪ |
| ಮನಸ್ಸಿನ ಪ್ರಕಾರ | : | ತತ್ತ್ವರೂಪ, ಇಂದ್ರಿಯರೂಪ |
| ಪುಣ್ಯ | : | ಕಾಮ್ಯ, ಅಕಾಮ್ಯ |
| ಕಾಮ್ಯಪುಣ್ಯ | : | ಪ್ರಾರಬ್ಧ ಅಪ್ರಾರಬ್ಧ |
| ಅನಿತ್ಯ ಪುಣ್ಯ | : | ಇಷ್ಟಪುಣ್ಯ, ಅನಿಷ್ಟಪುಣ್ಯ. |
| ಅನಿತ್ಯಪುಣ್ಯ | : | ಕಾಮ್ಯಕರ್ಮಜ, ಅಕಾಮ್ಯ ಕರ್ಮಜ. |
| ಧನುರ್ವಿದ್ಯೆ | : | ಲಕ್ಷ್ಯವೇದ ವಿದ್ಯೆ, ಶಬ್ದವೇಧ ವಿದ್ಯೆ. |
| ಸಂಸ್ಕಾರಗಳು (ಪ್ರಧಾನ) | : | ಬ್ರಾಹ್ಮಸಂಸ್ಕಾರ, ದೈವಸಂಸ್ಕಾರ. |
| ಬ್ರಹ್ಮಚಾರಿ | : | ಉಪಕುರ್ವಾಣ, ನೈಷ್ಠಿಕ. |
| ಪಾಪಸಂಗ್ರಹ | : | ವಿಹಿತಕರ್ಮತ್ಯಾಗದಿಂದ, ನಿಷಿದ್ಧಕರ್ಮಗ್ರಹಣದಿಂದ |
| ಇಂದ್ರಿಯಗಳು | : | ನಿತ್ಯ (ಸೂಕ್ಷ್ಮರೂಪದಲ್ಲಿ), ಅನಿತ್ಯ (ಪ್ರಾಕೃತ). |

| | | |
|---|---|---|
| ಗಾಯತ್ರೀ | : | ಬ್ರಹ್ಮಗಾಯತ್ರೀ, ವಿಶ್ವಾಮಿತ್ರ ಗಾಯತ್ರಿ |
| ಗಾಯತ್ರೀ | : | ಸಗರ್ಭ, ಆಗರ್ಭ |
| ಪ್ರತಿಮೆಗಳು | : | ಸಚ್ಛಾಸ್ತ್ರಗಳು, ಭಗವಂತನ ರೂಪಗಳು |
| ವೈಕಾರಿಕ ತತ್ತ್ವ | : | ಮನಸ್ಸು ಬುದ್ಧಿ |
| ಪದಾರ್ಥದ್ವಯ | : | ಮೂರ್ತ, ಅಮೂರ್ತ |
| ಕಾವ್ಯಗಳು | : | ದೃಶ್ಯ, ಶ್ರಾವ್ಯ. |
| ಯೋಗಮುಖ | : | ಕರ್ಮಾದಿ ವರ್ಜನ, ಭಗವನ್ನಿಷ್ಟಬುದ್ಧಿ |
| ಉಪಾಸನಾ | : | ಪಕ್ವೋಪಾಸನೆ, ಅಪಕ್ವೋಪಾಸನೆ. |
| ಉಪಾಸನೆ | : | ಪರೋಕ್ಷ ಉಪಾಸನೆ, ಅಪರೋಕ್ಷ ಉಪಾಸನೆ. |
| ಉಪಾಸನಾ | : | ಸತತ ಶಾಸ್ತ್ರಾಭ್ಯಾಸರೂಪ, ಧ್ಯಾನರೂಪ |
| ಪ್ರಾಣಾಯಾಮ | : | ಸಮಂತ್ರಕ, ಅಮಂತ್ರಕ. |
| ಜೀವರ ಜ್ಞಾನ | : | ಸ್ವರೂಪಜ್ಞಾನ, ವೃತ್ತಿಜ್ಞಾನ. |
| ಭ್ರಮ | : | ಔಪಾಧಿಕ, ನಿರುಪಾಧಿಕ. |
| ಲಜ್ಜಾ | : | ಸ್ವರೂಪ, ಅಸ್ವರೂಪ/ನಿತ್ಯ, ಅನಿತ್ಯ |
| ಆಲೋಕ | : | ನಿತ್ಯ, ಅನಿತ್ಯ |
| ಸುಖ | : | ಐಹಿಕ, ಪಾರತ್ರಿಕ. |
| ಸ್ವರ್ಗಕ್ಕೂ ಮಿಗಿಲಾದದ್ದು | : | ಜನನಿ, ಜನ್ಮಭೂಮಿ (ಭಾರತ). |
| ಜೀವ ಸೃಷ್ಟಿಯ ಮೂಲ | : | ಹೆಣ್ಣು ಗಂಡು |
| ದಿನದ ದ್ವಿತ್ವ | : | ಹಗಲು, ರಾತ್ರಿ |
| ಶ್ರೀಹರಿಯ ವಿಶಿಷ್ಟತೆ | ; | ಅಣೋರಣೀಯತ್ವ, ಮಹತೋಮಹೀಯತ್ವ |
| ಕಾರ್ಯಗಳ ಕಾರಣ | : | ಉಪಾದಾನ ಕಾರಣ, ಅಪಾದಾನ ಕಾರಣ (ಪರಿಣಾಮಿ ಕಾರಣ, ನಿಮಿತ್ತ ಕಾರಣ) |
| ಉಪಾಸನಾಧಿಕಾರಿಗಳು | : | ಸಿದ್ಧರು, ಸಾಧಕರು |
| ಮೋಕ್ಷಸಾಧನ | : | ಸ್ವಮತಸ್ಥಾಪನ, ಪರಮತ ನಿರಾಕರಣ |
| | : | ಯಥಾರ್ಥಜ್ಞಾನ (ವಿದ್ಯಾ), ಅಯಥಾರ್ಥಜ್ಞಾನ(ಅವಿದ್ಯಾ) |

# ಮೂರರ ವೈಭವ

ಒಂದು ಎರಡು ಅಲ್ಲಿದ್ದು ಮೂರು. ಮುಂದಿನ ಸಂಖ್ಯೆ. ಬ್ರಹ್ಮಾಂಡದಲ್ಲಿರುವುದು ಈಶ - ಜೀವ-ಜಡ ಈ ಮೂರು. ಮತ್ತೊಂದಿಲ್ಲ. ಸರ್ವವೇದ ಸಾರವೆನಿಸಿದ ಓಂಕಾರವು ಅಉಮಗಳನ್ನೊಳಗೊಂಡಿದೆ. ಇದರ ಪ್ರತಿಪಾದ್ಯ ಭಗವಂತನನ್ನು ಕಾಣಲು ಜ್ಞಾನ, ಭಕ್ತಿ ವೈರಾಗ್ಯ ಅವಶ್ಯಕ. ಬ್ರಹ್ಮಾಂಡದಲ್ಲಿಯ ಜೀವರು ಸಾತ್ವಿಕ - ರಾಜಸ-ತಾಮಸರು. ಅವರ ಸೃಷ್ಟಿ-ಸ್ಥಿತಿ-ಲಯ ಕಾರ್ಯವನ್ನು ಭಗವಂತ ಮಾಡುವ. ಜೀವರಿಗಂಟಿಕೊಂಡ ತಾಪತ್ರಯಗಳನ್ನು ನೀಗಿಸಿಕೊಳ್ಳಲು ತ್ರಿಕರಣಶುದ್ಧಿಯೊಂದಿಗೆ ಪ್ರಸ್ಥಾನತ್ರಯಗಳ ಅಧ್ಯಯನ ಬೇಕು. ಭೂತ-ವರ್ತಮಾನ-ಭವಿಷ್ಯ ಕಾಲಗಳಲ್ಲಿ ಏಕಪ್ರಕಾರನಾಗಿ ಇದ್ದು ಮೂರು ಲೋಕಗಳ ಜೀವರನ್ನು ಸಲಹಿ ಅವರ ಯೋಗ್ಯತಾನುಸಾರವಾಗಿ ಮೂರು ಗತಿಯನ್ನು ಕಲ್ಪಿಸುವವನು ಶ್ರೀಹರಿ. ತ್ರಿಮೂರ್ತಿಗಳೆನಿಸಿದ ಬ್ರಹ್ಮವಿಷ್ಣುಮಹೇಶ್ವರ ಶಬ್ದವಾಚ್ಯನಾಗಿ, ಅಂತಸ್ಥನಾಗಿದ್ದು ವಿಷ್ಣುವೇ ಸರ್ವವ್ಯಾಪ್ತನಾಗಿ ವೇದತ್ರಯಗಳಲ್ಲಿ ಪ್ರತಿಪಾದ್ಯನಾಗಿರುವ. ತ್ರಿಕರಣ ಶುದ್ಧಿಯಿಂದ ಭಗವಂತನನ್ನು ಯೋಗತ್ರಯಗಳ ಮೂಲಕ ಆರಾಧಿಸಿ ಸದ್ಗತಿ ತ್ರಿಸವನದಲ್ಲೂ ಕಾಣುವುದು. ಹೀಗೆ ಅನೇಕ ರೀತಿಯಿಂದ ಈ ಮೂರರ ವೈಭವವನ್ನು ಕಾಣುವ ಪ್ರಯತ್ನ ಇಲ್ಲಿದೆ.

**ತತ್ತ್ವತ್ರಯ** : ಈಶ, ಜೀವ, ಜಡ.

**ಓಂಕಾರಗತಾಕ್ಷರ** : ಅ ಉ ಮ

**ಅವಸ್ಥಾಗಳು** : ಬಾಲ್ಯ, ಯೌವನ, ವಾರ್ಧಕ್ಯ.

**ಸಾಧನೆಗಳು (ಯೋಗ)** : ಜ್ಞಾನ, ಭಕ್ತಿ ವೈರಾಗ್ಯ.

**ಮೋಕ್ಷಸಾಧನ** : ಭೇದ ಜ್ಞಾನ, ಪರಮಾತ್ಮನಲ್ಲಿ ಭಕ್ತಿ ನಿಷ್ಕಾಮ ಕರ್ಮ.

**ತ್ರಿಕರಣಗಳು** : ಕಾಯ, ವಾಕ್, ಮನಸ್ಸು

**ಭಾಗವತ ಚಿಂತನೆಯ ಸೋಪಾನ** : ಧಾರಣ, ಧ್ಯಾನ, ಸಮಾಧಿ.

**ತಾಪತ್ರಯ** : ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕ.

**ಕಾಲ (ಅಹಃ)** : ಪ್ರಾತಃ, ಮಧ್ಯಾಹ್ನ, ಸಾಯಂಕಾಲ.

**ಸವನಗಳು** : ಪ್ರಾತಃಸವನ, ಮಾಧ್ಯಂದಿನಸವನ, ಸಾಯಂಸವನ

**ಜೀವ ಸಮುದಾಯ** : ದೇವ, ಮಾನುಷ, ದಾನವರು

**ಜೀವರು** : ಸಾತ್ವಿಕ, ರಾಜಸ, ತಾಮಸ.

**ಪದತ್ರಯರು** : ಪರಾರ್ಧ್ಯ(ವಿಷ್ಣು), ಪರಾರ್ಧಿ(ಲಕ್ಷ್ಮೀ), ಪರಾರ್ಧ್ಯ (ವಾಯು)

| | | |
|---|---|---|
| ಜೀವರು | : | ದೇಹಾಲಂಬನರು, ಪ್ರತೀಕಾಲಂಬನರು, ಅಪ್ರತೀಕಾಲಂಬನರು. |
| ಅಧ್ಯಾತ್ಮ | : | ಶರೀರ , ಇಂದ್ರಿಯ, ಮನಸ್ಸು |
| ಸಂಸಾರ ಬದ್ಧಜೀವರು | : | ಉತ್ತಮರು, ಮಧ್ಯಮರು, ಅಧಮರು. |
| ಜ್ಞಾನ ಕರಣಗಳು (ಅನುಪ್ರಮಾಣ) | : | ಪ್ರತ್ಯಕ್ಷ, ಅನುಮಾನ, ಆಗಮ |
| ಗುಣಗಳು | : | ಸತ್ವಗುಣ, ರಜೋಗುಣ, ತಮೋಗುಣ. |
| ತ್ರಿಮೂರ್ತಿಗಳು | : | ಬ್ರಹ್ಮ, ವಿಷ್ಣು, ಮಹೇಶ್ವರ. |
| ಸೃಷ್ಟ್ಯಾದಿತ್ರಯ | : | ಸೃಷ್ಟಿ, ಸ್ಥಿತಿ, ಲಯ. |
| ಕಾಲತ್ರಯ | : | ಭೂತ, ವರ್ತಮಾನ, ಭವಿಷ್ಯ. |
| ಅಚೇತನರು (ಜಡ) | : | ನಿತ್ಯ, ಅನಿತ್ಯ, ನಿತ್ಯಾನಿತ್ಯ. |
| ತ್ರಿಲೋಕಗಳು | : | ಪಾತಾಲ, ಭೂ, ಸ್ವರ್ಗ |
| | : | ಅರ್ವಾಂಚಲೋಕ, ನೃಲೋಕ, ಪರಾಂಚಲೋಕ |
| | : | ಅಧೋಲೋಕ, ಭೂಲೋಕ, ಊರ್ಧ್ವಲೋಕ. |
| ಅಕಾರ (ಅರ್ಥ) | : | ಅಭಾವತ್ವ, ವಿರೋಧಿತ್ವ, ಅನ್ಯತ್ವ |
| ಪರಶುಕ್ಲತ್ರಯರು | : | ಲಕ್ಷ್ಮೀ, ಬ್ರಹ್ಮ ವಾಯು, ಸರಸ್ವತೀ ಭಾರತೀ. |
| ಸಾಧನಗಳು | : | ಶ್ರವಣ, ಮನನ, ನಿದಿಧ್ಯಾಸನ |
| ಮನೋವೃತ್ತಿಗಳು | : | ಧಾರಣ, ಧ್ಯಾನ, ಸಮಾಧಿ. |
| ಪ್ರಸ್ಥಾನತ್ರಯ | : | ಸೂತ್ರಪ್ರಸ್ಥಾನ, ಗೀತಾಪ್ರಸ್ಥಾನ, ಉಪನಿಷತ್‌ಪ್ರಸ್ಥಾನ. |
| ಸಾಧನ ಮಾರ್ಗಗಳು | : | ಜ್ಞಾನಮಾರ್ಗ, ಕರ್ಮಮಾರ್ಗ, ಭಕ್ತಿಮಾರ್ಗ. |
| ಜೀವನ ಲಕ್ಷಣ | : | ಜ್ಞಾನ, ಇಚ್ಛಾ, ಕ್ರಿಯಾ . |
| ತ್ರಿಕರ್ಮಗಳು | : | ಸಂಚಿತ, ಆಗಾಮಿ, ಪ್ರಾರಬ್ಧ |
| ಅವಸ್ಥಾತ್ರಯ | : | ಜಾಗೃತ (ಎಚ್ಚರ), ಸ್ವಪ್ನ(ಕನಸು), ಸುಷುಪ್ತಿ(ಗಾಢನಿದ್ರೆ). |
| ನಿಯಾಮಕ ರೂಪಗಳು | : | ವಿಶ್ವ, ತೈಜಸ, ಪ್ರಾಜ್ಞ. |
| ವಂದನೀಯ ದೇವತೆಗಳು | : | ಇಷ್ಟ, ವಿಶಿಷ್ಟ, ಅಧಿಕೃತ. |

| | | |
|---|---|---|
| ಮಂಗಳಾಚರಣೆ | : | ಕಾಯಿಕ, ವಾಚನಿಕ, ಮಾನಸಿಕ. |
| ವೇದಗಳ ರೂಪ | : | ಪದ್ಯರೂಪ, ಗದ್ಯರೂಪ, ಗಾನರೂಪ. |
| ವ್ಯಾಹೃತಿಗಳು | : | ಭೂಃ, ಭುವಃ, ಸ್ವಃ. |
| ಲೋಕಗಳು | : | ಭೂಃ, ಭುವಃ, ಸ್ವಃ |
| ಪ್ರಾಣತ್ರಯ | : | ಮುಖ್ಯ ಪ್ರಾಣ, ಅವರಪ್ರಾಣ, ಮಧ್ಯಪ್ರಾಣ |
| ವೇದಪಠಿಸಲು ಬೇಕಾದದ್ದು: | | ಋಷಿ, ಛಂದಸ್ಸು ದೇವತೆ. |
| ವೇದದ ರೀತಿಗಳು | : | ಮೂಲವೇದ, ಉಪವೇದ, ಅವಾಂತರವೇದ |
| ಜ್ಞಾನ | : | ವೃತ್ತಿಜ್ಞಾನ, ಜ್ಞಪ್ತಿಜ್ಞಾನ, ಸಾಕ್ಷಿಜ್ಞಾನ |
| ಆನಂತ್ಯಗಳು | : | ದೇಶತಃ, ಕಾಲತಃ, ಗುಣತಃ |
| ವಿಷ್ಣು ಸ್ಥಾನಗಳು (ತ್ರಿಧಾಮಗಳು) | : | ಶ್ವೇತದ್ವೀಪ, ಅನಂತಾಸನ, ವೈಕುಂಠ |
| ರೂಪತ್ರಯ (ಬಿಂಬ) | : | ಅಗ್ರೇಶ, ಮೂಲೇಶ, ಪ್ರಾದೇಶ. |
| ಭಗವಂತನ ಸಾಕ್ಷಾತ್ಕಾರ | : | ವಾಸನಾಮಯ, ಅಪರೋಕ್ಷ, ಬಿಂಬಾಪರೋಕ್ಷ. |
| ಪುರುಷತ್ರಯ | : | ಪುರುಷೋತ್ತಮ, ಅಕ್ಷರಪುರುಷ, ಕ್ಷರಪುರುಷ |
| ಪಿತೃಗಳು | : | ಕವ್ಯವಾಹ, ಯಮ, ಸೋಮ. |
| ಪಿತೃದೇವತೆಗಳು | : | ವಸು, ರುದ್ರ, ಆದಿತ್ಯ. |
| ಜಯಾತಿಥಿಗಳು | : | ತೃತೀಯಾ, ಅಷ್ಟಮೀ, ತ್ರಯೋದಶೀ. |
| ಭದ್ರಾತಿಥಿಗಳು | : | ದ್ವಿತೀಯಾ, ಸಪ್ತಮೀ, ದ್ವಾದಶೀ. |
| ರಿಕ್ತತಿಥಿಗಳು | : | ಚತುರ್ಥೀ, ನವಮೀ, ಚತುರ್ದಶೀ. |
| ನಂದಾತಿಥಿಗಳು | : | ಪಾಡ್ಯ, ಷಷ್ಠೀ, ಏಕಾದಶೀ. |
| ತಿಥಿತ್ರಯ | : | ದಶಮೀ, ಏಕಾದಶೀ, ದ್ವಾದಶೀ. |
| ಮೋಕ್ಷ | : | ಸನ್ಮೋಕ್ಷ (ಸಾತ್ವಿಕ), ಸದಸನ್ಮೋಕ್ಷ (ರಾಜಸ), ಅಸನ್ಮೋಕ್ಷ (ತಾಮಸ) |
| ನರಕದ್ವಾರಗಳು | : | ಕಾಮ, ಕ್ರೋಧ, ಲೋಭ. |

ಅಗ್ನಿತ್ರಯ : ಗಾರ್ಹಪತ್ಯ, ದಕ್ಷಿಣ, ಆವಹನೀಯ.

ಇತಿಹಾಸಗಳು : ರಾಮಾಯಣ, ಮಹಾಭಾರತ, ಪಂಚರಾತ್ರ.

ಅದ್ವೈತ : ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತ.

ಈಷಣತ್ರಯ : ದಾರೇಷಣ, ಪುತ್ರೇಷಣ, ವಿತ್ತೇಷಣ.

ಪಿತೃದೇವತಾ ಪ್ರೀತ್ಯರ್ಥ : ಪಾಣೇಹೋಮ, ಪಿಂಡದಾನ, ಬ್ರಾಹ್ಮಣಾರಾಧನೆ

ತ್ರಿಚರ(ಪ್ರಾಣಿಗಳು) : ಖೇಚರ, ಭೂಚರ, ಜಲಚರ.

ಆಹಾರ : ಸಾತ್ವಿಕ, ರಾಜಸ, ತಾಮಸ.

ನ್ಯಾಸತ್ರಯ : ಸೃಷ್ಟಿನ್ಯಾಸ, ಸ್ಥಿತಿನ್ಯಾಸ, ಸಂಹಾರನ್ಯಾಸ.

ಪೀಡಾತ್ರಯ : ದೇಶಾವರಿಯರ, ಪುತ್ರಪೌತ್ರರ, ಸ್ತ್ರೀ.

ಪಿತೃತ್ರಯ : ಪಿತಾ, ಪಿತಾಮಹ, ಪ್ರಪಿತಾಮಹ.

ಮಾತೃತ್ರಯ : ಮಾತಾ, ಮಾತಾಮಹೀ, ಮಾತುಃ ಪ್ರಪಿತಾಮಹೀ.

ಮುಖ್ಯ ಆಸನಗಳು : ಸ್ವಸ್ತಿಕಾಸನ, ಪದ್ಮಾಸನ, ವೀರಾಸನ.

ಪ್ರಾಣಾಯಾಮ : ರೇಚಕ, ಪೂರಕ, ಕುಂಭಕ.

ಕರ್ಮತ್ರಯ : ನಿತ್ಯ, ನೈಮಿತ್ತಿಕ, ಕಾಮ್ಯ.

ಆತ್ಮತ್ರಯ : ಆತ್ಮ ಅಂತರಾತ್ಮ (ಜೀವಾತ್ಮ), ಪರಮಾತ್ಮ.

ರುದ್ರನೇತ್ರಸ್ಥಿತರು : ಸೂರ್ಯ, ಚಂದ್ರ, ಅಗ್ನಿ

ವಾಯ್ವವತಾರತ್ರಯ : ಹನುಮ, ಭೀಮ, ಮಧ್ವ

ಭಾಷಾತ್ರಯ : ದರ್ಶನ, ಗುಹ್ಯ, ಸಮಾಧಿ

ಪ್ರಮಾಣಗಳು(ಅನುಪ್ರಮಾಣ) : ಪ್ರತ್ಯಕ್ಷ ಅನುಮಾನ, ಆಗಮ.

ಅನುಮಾನ : ಕಾರ್ಯಾನುಮಾನ, ಕಾರ್ಯಕಾರಣಾನುಮಾನ, ಕಾರಣಾನುಮಾನ

ಅಲಕ್ಷಣಗಳು : ಅವ್ಯಾಪ್ತಿ ಅತಿವ್ಯಾಪ್ತಿ ಅಸಂಭವ.

ಭಗವಂತನ ಪುರುಷರೂಪ: ಬ್ರಹ್ಮಾಂಡದ ಹೊರಗೆ, ಒಳಗೆ, ಪಿಂಡಾಂಡ.

ಶ್ರೀಪ್ರಕೃತಿರೂಪ : ಶ್ರೀ, ಭೂ, ದುರ್ಗಾ.

ಕರ್ಮಗಳು : ದೈಹಿಕ, ದೈಶಿಕ, ಕಾಲಿಕ.

ಮನುಷ್ಯ ಸ್ವಭಾವ : ದೈವೀ, ರಾಜಸೀ, ಆಸುರೀ.

ಅಶ್ರುತ್ರಯ : ಆನಂದಾಶ್ರು, ದುಃಖಾಶ್ರು, ನಕ್ರಾಶ್ರು.

ಮುಕ್ತ (ಎಂದರೆ) : ಚರಮದೇಹ, ಅವಿದ್ಯಾಬಂಧ, ಕರ್ಮಬಂಧ, (ಇವುಗಳಿಂದ ಬಿಡುಗಡೆ ಹೊಂದಿದವರು)

ಏಕೀಭಾವ : ಅವಿರೋಧ, ಸಾದೃಶ್ಯ, ಏಕದೇಶಸ್ಥಿತಿ

ತ್ರಿಜ್ಞಾನ (ಕಾಲ) : ಭೂತಜ್ಞಾನ, ವರ್ತಮಾನಜ್ಞಾನ, ಭವಿಷ್ಯತ್ ಜ್ಞಾನ.

ತ್ರಿಜ್ಞಾನ (ವ್ಯಕ್ತಿ) : ಆಪ್ತಜ್ಞಾನ, ಮಿತ್ರಜ್ಞಾನ, ದ್ವೇಷಜ್ಞಾನ.

ಕರ್ಮಗಳು : ಸಾತ್ವಿಕ ಕರ್ಮ, ರಾಜಸ ಕರ್ಮ, ತಾಮಸ ಕರ್ಮ.

ಶಾಂತಿಗೆ ಬೇಕು : ಭಗವಂತನಲ್ಲಿ ವಿಶ್ವಾಸ, ಕರ್ತವ್ಯನಿಷ್ಠೆ ವಿಷಯ ವಿರಕ್ತಿ

ಸತ್ತ ನಂತರ ಬರುವ ವಸ್ತುಗಳು : ಪಾಪಪುಣ್ಯ, ಕರ್ಮ, ಸಂಸ್ಕಾರ.

ಸತ್ತನಂತರ ಉಳಿಯುವ ವಸ್ತುಗಳು : ಕರ್ಮ, ಕೀರ್ತಿ/ಅಪಕೀರ್ತಿ, ಮಕ್ಕಳು.

ಮುಖ್ಯವೃತ್ತಿಗಳು : ಯೋಗ, ರೂಢಿ, ಯೋಗರೂಢಿ

ಲಕ್ಷಣಾವೃತ್ತಿ : ಜಹಲ್ಲಕ್ಷಣ, ಅಜಹಲ್ಲಕ್ಷಣ, ಲಕ್ಷಿತಲಕ್ಷಣ

ವಾಕ್ಯವೃತ್ತಿ : ನಿರವಕಾಶ, ಸಾವಕಾಶ, ತಟಸ್ಥ

ಧರ್ಮವಿರೋಧಿಗಳು : ಕಾಮ, ಭಯ, ದುರಾಶೆ.

ಕಾರ್ಯಸಿದ್ಧಿಯ ನೀತಿಗಳು : ಅಧಮಗೆ – ದಂಡ, ಮಧ್ಯಮಗೆ – ಭೇದ, ಉತ್ತಮಗೆ – ಸಾಮ.

ರಕ್ಷಣೆಗೆ ಅರ್ಹರು : ಶರಣಾಗತರು, ಸೇವಕರು, ದಾಸನಾದವನು.

ಇರಬಾರದ ದೋಷಗಳು : ಅನ್ಯದ್ರವ್ಯಾಪಹಾರ, ಪರಸ್ತ್ರೀಸಂಗ, ಸನ್ಮಿತ್ರತ್ಯಾಗ.

ಸಂಘನಾಶಕಗಳು : ಎಲ್ಲರೂ ನಾಯಕರಾದಲ್ಲಿ, ಎಲ್ಲರೂ ಮತಿವಂತರೆಂದು ತಿಳಿದಲ್ಲಿ ಪ್ರತಿಷ್ಠೆ – ಸ್ವಾರ್ಥಪರರಾದಲ್ಲಿ

ಅಭಾವಗಳು : ಪ್ರಾಗಭಾವ, ಪ್ರಧ್ವಂಸಾಭಾವ, ಸದಾಭಾವ.

ನಿತ್ಯಾನಿತ್ಯ ವಸ್ತುಗಳು : ಪುರಾಣಗಳು, ಕಾಲ, ಪ್ರಕೃತಿ.

ಅವೈದಿಕ ಮತಗಳು : ಚಾರ್ವಾಕ, ಬೌದ್ಧ, ಜೈನ.

ವೇದತ್ರಯ : ಋಗ್ವೇದ, ಯಜುರ್ವೇದ, ಸಾಮವೇದ (ಅಥರ್ವಣ).

ಮನುಷ್ಯದೇಹ : ಸ್ತ್ರೀ, ಪುರುಷ, ನಪುಂಸಕ.

ಲಿಂಗಗಳು : ಸ್ತ್ರೀ, ಪುಂ, ನಪುಂಸಕ.

ವೇದಾಧ್ಯಯನಕ್ಕೆ : ಯಜ್ಞ, ದಾನ, ತಪಸ್ಸು

ತಪಸ್ಸು : ಕಾಯಕ, ವಾಙ್ಮಯ, ಮಾನಸಿಕ.

ದಂಡತ್ರಯ (ಉಪಾಯತ್ರಯ) : ಸಾಮ, ಭೇದ, ದಂಡ,
ವಾಕ್‌ದಂಡ, ಮನೋದಂಡ, ದೇಹದಂಡ,
ಪ್ರಾಕೃತಿಕ, ರಾಜದಂಡ, ದೈವೀದಂಡ.

ಹರಿದ್ವೇಷಿಗಳು : ರಾಕ್ಷಸರು, ಅಸುರರು, ಪಿಶಾಚರು.

ಉಪಾಸನಾ (ದ್ವಾರಗಳು) : ಅಗ್ನಿ ಆದಿತ್ಯ, ವಾಯು.

ಲೋಕ ಪ್ರತೀಕಗಳು : ಅಗ್ನಿ, ಆದಿತ್ಯ, ವಾಯು

ಅಹಂಕಾರತತ್ವ : ವೈಕಾರಿಕ, ತೈಜಸ, ತಾಮಸ.

ಭ್ರಮಾಗಳು : ಕಾರಕಭ್ರಮಾ, ಕ್ರಿಯಾಭ್ರಮಾ, ದ್ರವ್ಯಭ್ರಮಾ.

ವಿದ್ಯಾರ್ಜನೆ ಕಂಟಕ : ಗುರುಶುಶ್ರೂಷಾರಾಹಿತ್ಯ, ಅವಸರದ ಸತ್ಕಾರ್ಯ, ಆತ್ಮಪ್ರಶಂಸೆ.

ಗೌರವಾರ್ಹ : ವಿದ್ಯಾ, ಜನ್ಮ, ಕರ್ಮ.

ವೃದ್ಧಿಸುವ ಶೇಷ : ಋಣಶೇಷ, ಅಗ್ನಿಶೇಷ, ಶತ್ರುಶೇಷ.

ಕರ್ಮಗಳು : ವಿಹಿತ, ನಿಷಿದ್ಧ, ಉದಾಸೀನ.

ಪ್ರಧಾನ ಲೋಹಗಳು : ಸುವರ್ಣ, ರಜತ, ತಾಮ್ರ.

ತೇಜಸ್ಸಿನ ಗುಣ : ಶಬ್ದ, ಸ್ಪರ್ಶ, ರೂಪ.

ಉಪಾಸನೆ : ಅಂತರುಪಾಸನೆ, ಬಹಿರುಪಾಸನೆ, ಸರ್ವಗತತ್ವೋಪಾಸನೆ.

ವೃತ್ತಿಗಳು : ಪರಮಮುಖ್ಯವೃತ್ತಿ ಮುಖ್ಯವೃತ್ತಿ ವ್ಯಾವಹಾರಿಕ ವೃತ್ತಿ.

ಜ್ಞಾನದ ವ್ಯವಸ್ಥಿತಿ : ಯಥಾರ್ಥ (ದೇವತೆಗಳಿಗೆ), ಯಥಾರ್ಥ-ಅಯಥಾರ್ಥ (ಮನುಷ್ಯರಿಗೆ), ಅಯಥಾರ್ಥ (ದೈತ್ಯರಿಗೆ).

ಅನುಮಾನ : ಕೇವಲಾನ್ವಯಿ, ಕೇವಲ ವ್ಯತಿರೇಕಿ, ಅನ್ವಯವ್ಯತಿರೇಕಿ

**ಜ್ಞಾನದ ವಿಧಗಳು** : ಅಭಿಜ್ಞಾ, ಪ್ರತ್ಯಭಿಜ್ಞಾ, ಸ್ಮರಣೆ.

**ತ್ರಿಕರಣ** : ತನು, ಮನ, ಧನ.

**ಶೇಷಗಳು (ಉಳಿಸಬಾರದು)** : ಋಣಶೇಷ, ಅಗ್ನಿಶೇಷ, ಶತ್ರುಶೇಷ.

**ದೈಹಿಕ ದೋಷಗಳು** : ಪಿತ್ತ ವಾತ, ಕಫ.

**ಬಾಹ್ಯೇಂದ್ರಿಯ ಪ್ರಕಾರ** : ದೈವ, ಆಸುರ, ಮಧ್ಯಮ

**ಇರಬೇಕಾದ ಮೂರು** : ವಿನಯ, ಸಚ್ಚಾರಿತ್ರ್ಯ, ಮಾನವೀಯತೆ.

**ಉಪಾಸನಾ** : ಅಂತಃ, ಬಹಿಃ, ಸರ್ವಗತ.

**ಧನದ ಗತಿಗಳು** : ದಾನ, ಭೋಗ (ವ್ಯಯ), ನಾಶ.

**ಅಮೂರ್ತ ಪಿತೃಗಳು** : ವೈರಾಜ, ಅಗ್ನಿಷ್ವಾತ್ತ, ಬರ್ಹಿಷರ.

**ಋಷಿತ್ರಯರು** : ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ.

**ಮೀಮಾಂಸಾಶಾಸ್ತ್ರ** : ಬ್ರಹ್ಮಮೀಮಾಂಸಾ, ದೈವೀಮೀಮಾಂಸಾ, ಕರ್ಮಮೀಮಾಂಸಾ.

**ಪ್ರವರ್ತಕರು** : ವೇದವ್ಯಾಸರು, ಪೈಲಶೇಷರು, ಜೈಮಿನಿ.

**ಅನುಯಾಜಗಳು** : ಬರ್ಹಿ, ನರಾಶಂಸ, ಸ್ವಿಷ್ಟಕೃದಗ್ನಿ

**ಕಥಾಗಳು** : ವಾದ, ಜಲ್ಪ ವಿತಂಡ.

**ಕರ್ಮಸಿದ್ಧಿ** : ಸ್ವಭಾವ (ಜೀವನ ಯೋಗ್ಯತೆ), ಅನಾದಿಕರ್ಮ,
ಪುರುಷ ಪ್ರಯತ್ನ.

**ಭಾಷಾತ್ರಯ (ಮಹಾಭಾರತದಲ್ಲಿ)** : ಸಮಾಧಿ, ಗುಹ್ಯ, ದರ್ಶನ.

**ಸ್ವಾತಂತ್ರ್ಯ** : ದತ್ತಸ್ವಾತಂತ್ರ್ಯ, ಸ್ವಗತಸ್ವಾತಂತ್ರ್ಯ, ಸರ್ವಸ್ವಾತಂತ್ರ್ಯ.

**ಅಕ್ಷರತ್ರಯ** : ಪರ, ಅಪರ, ಪರತಃಪರ.

**ನಿತ್ಯಸಂಸಾರಿಗಳು** : ಭೂಪ್ರಾಚುರ್ಯರು, ಸ್ವರ್ಗಪ್ರಾಚುರ್ಯರು,
ನಿರಯ ಪ್ರಾಚುರ್ಯರು.

**ದಾನ ನಿಷ್ಫಲ** : ಕೊಟ್ಟದ್ದನ್ನು ಪಶ್ಚಾತ್ತಪಿಸಿದಲ್ಲಿ, ಕೊಟ್ಟದ್ದು ಹೇಳಿಕೊಂಡಲ್ಲಿ
ಅಪಾತ್ರದಾನ.

**ಸಾತ್ವಿಕ ಸ್ವಭಾವ** : ಶುದ್ಧ ಮನಸ್ಸು ಸುಸಂಸ್ಕೃತ ಮಾತು, ಸತ್ಕರ್ಮಾಚರಣೆ.

| | | |
|---|---|---|
| ತಾಮಸ ಸ್ವಭಾವ | : | ದುಷ್ಟ ಮನಸ್ಸು, ಅಸಂಸ್ಕೃತ ಮಾತು, ದುಷ್ಟಕರ್ಮ. |
| ಉಪಾಸನಾ ರೂಪ | : | ಅಂತರ್ಗತತ್ವ, ಬಹಿರ್ಗತತ್ವ, ಸರ್ವಗತತ್ವ. |
| ಸ್ನಾತಕರು | : | ವಿದ್ಯಾಸ್ನಾತಕರು, ವ್ರತಸ್ನಾತಕರು, ಉಭಯಸ್ನಾತಕರು. |
| ಕರ್ಮಸಾಕ್ಷಿಗಳು | : | ದೇವ, ಅಗ್ನಿ ದ್ವಿಜ. |
| ನಞ್ ಅರ್ಥಗಳು | : | ಅನ್ಯಾನ್ಯೋಭಾವ, ಸಂಸರ್ಗಾಭಾವ, ವಿರೋಧ |
| ಓಂಕಾರಶಬ್ದರೂಪ | : | ಅಖಂಡಶಬ್ದ ತ್ರಿವರ್ಣಶಬ್ದ ಅಷ್ಟವರ್ಣಶಬ್ದ |
| ಚೇತನರು | : | ಸಮರು (ಭಗವಂತ ತನ್ನ ರೂಪಗಳು), ಸಮಾಸಮರು (ಮಹಾಲಕ್ಷ್ಮಿ), ಅಸಮರು (ಬ್ರಹ್ಮಾದಿ ಜಗತ್ತು). |
| ಸವನತ್ರಯ | : | ಪ್ರಥಮ(24ವರ್ಷ), ದ್ವಿತೀಯ(44), ತೃತೀಯ (48 ).<br>ಪ್ರಾತಃಸವನ, ಮಧ್ಯಾಹ್ನ ಸವನ, ಸಾಯಂಸವನ |
| ಉಪಾಸನೆ | : | ಅಂತರುಪಾಸನೆ, ಬಹಿರುಪಾಸನೆ, ಸರ್ವಗತತ್ವೋಪಾಸನೆ. |
| ಕರ್ಮಫಲ | : | ಇಷ್ಟ ಅನಿಷ್ಟ ಮಿಶ್ರ. |
| ಶಕ್ತಿತ್ರಯ | : | ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿ |
| ಗೀತೆಯ ತ್ರಿಷಟ್ಕ | : | 1–6 ಅಧ್ಯಾಯಗಳು, 7–12 ಅಧ್ಯಾಯಗಳು, 13–18 ಅಧ್ಯಾಯಗಳು. |
| ತ್ರಿಸಂಧ್ಯಾ | : | ಪ್ರಾತಃ, ಮಧ್ಯಾಹ್ನ ಸಾಯಂ. |
| ಧರ್ಮತ್ರಯ | : | ಸಾಮಾಜಿಕಧರ್ಮ, ಸ್ವಧರ್ಮ, ಸನಾತನ ಧರ್ಮ. |
| ತ್ರಿವೃತ್‌ಕರಣಗಳು | : | ಪೃಥ್ವಿ, ಜಲ, ಅಗ್ನಿ |
| ನಿಯತ ಕರ್ಮಗಳು | : | ಯಜ್ಞ, ದಾನ, ತಪಸ್ಸು |
| ಚಿತ್ತವೃತ್ತಿಗಳು | : | ಇಚ್ಛಾ, ಪ್ರಯತ್ನ ಅನುಭವ. |
| ತ್ರಿ ಊರ್ಮಿಗಳು | : | ಕ್ಷುತ್ (ಹಸಿವು), ಮೋಹ (ಶೋಕ), ಜರಾ (ವ್ಯಾಧಿ). |
| ಕಾಲಾಧೀನವಾದವು | : | ಜನನ, ವಿವಾಹ, ಮರಣ. |
| ಸದಾ ಇರಬೇಕಾದದ್ದು | : | ಸಜ್ಜನರ ಸಂಗ, ದೇವರಸ್ಮರಣೆ, ಸದಾದುಡಿಮೆ. |
| ಸದಾ ಪಾಲಿಸಬೇಕಾದ್ದು | : | ಸತ್ಯ, ಅಹಿಂಸೆ, ದಯೆ. |

| | | |
|---|---|---|
| ಧರ್ಮಲಕ್ಷಣಗಳು | : | ವೇದವಿಹಿತಧರ್ಮ, ಶಾಸ್ತ್ರೋಕ್ತ ಧರ್ಮ, ಶಿಷ್ಟಾಚಾರ. |
| ದುಷ್ಟರು | : | ಕ್ರಿಯಾದುಷ್ಟ ಮನೋದುಷ್ಟ ವಾಕ್‌ದುಷ್ಟ |
| ದಾನ ಫಲನಾಶಕಗಳು | : | ಅಶ್ರದ್ಧೆ ಅಪಾತ್ರದಾನ, ದಾನಮಾಡಿ ಪರಿತಪಿಸುವುದು. |
| ಪಿತೃತ್ರಯರು | : | ಭಗವಂತ, ಜನ್ಮದಾತ, ಗುರು. |
| ಅರ್ಥತ್ರಯ | : | ವಾಚ್ಯಾರ್ಥ, ಲಕ್ಷ್ಯಾರ್ಥ, ವ್ಯಂಗ್ಯಾರ್ಥ (ಧ್ವನಿ). |
| ಆಗಮತ್ರಯ | : | ವೈಷ್ಣವಾಗಮ, ಶೈವಾಗಮ, ಶಾಕ್ತಾಗಮ. |
| ನಾಸ್ತಿಕರು | : | ಕ್ರಿಯಾ ದುಷ್ಟ ಮನೋದುಷ್ಟ ವಾಕ್‌ದುಷ್ಟ |
| ಪುರುಷತ್ರಯ | : | ಪ್ರಥಮ, ಮಧ್ಯಮ, ಉತ್ತಮ.<br>ಅವನು, ನೀನು, ನಾನು |
| ವಚನತ್ರಯ | : | ಏಕವಚನ, ದ್ವಿವಚನ, ಬಹುವಚನ. |
| ಯೋಗಿ ಜ್ಞಾನ | : | ಋಜು, ತಾತ್ವಿಕ, ಅತಾತ್ವಿಕ |
| ಅಯೋಗಿಜ್ಞಾನ | : | ಮುಕ್ತಿ ನಿತ್ಯಸಂಸಾರಿ, ತಮೋಯೋಗಿಜ್ಞಾನ. |
| ಮಂಡಲತ್ರಯ | : | ಸೂರ್ಯ, ಚಂದ್ರ, ಅಗ್ನಿ |
| ಮಾರ್ಗತ್ರಯ | : | ದೇವಯಾನ, ಪಿತೃಯಾನ, ಧೂಮಯಾನ |
| ಯೋಗತ್ರಯ(ಉಪಾಯಗಳು) | : | ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ |
| ವ್ಯರ್ಥವಾದದ್ದು | : | ಧೈರ್ಯರಹಿತವಿದ್ಯೆ, ಜಿಪುಣನ ಧನ, ಹೇಡಿಯ ಬಲ. |
| ಪತಿವ್ರತೆಯಲ್ಲಿರಲಿ | : | ಪತಿಭಕ್ತಿ ಅದುಷ್ಟತ್ವ, ಸುಭಾಷಣ (ಮಿತಭಾಷಣ) |
| ಬ್ರಹ್ಮಾಂಡಾವಸ್ಥೆಗಳು | : | ಸೃಷ್ಟಿ ಸ್ಥಿತಿ, ಸಂಹಾರ |
| ಪ್ರಧಾನ ಭಗವದ್ರೂಪ | : | ಪುರುಷ (ಸೃಷ್ಟಿಕಾರ್ಯ), ಪರಮಾತ್ಮ (ಬ್ರಹ್ಮಾಂಡದ ಒಳ ಹೊರಗೆ), ಬಿಂಬ (ಜೀವರ ಅಂತರ್ಯಾಮಿ). |
| ಅಕ್ಷರದೇವತೆ | : | ಉತ್ತಮ (ನಾರಾಯಣ), ಮಧ್ಯಮ (ಲಕ್ಷ್ಮೀ), ಅಧಮ (ಬ್ರಹ್ಮವಾಯು) |
| ಪ್ರಾಣದೇವತೆ | : | ಉತ್ತಮ (ಪರಮಾತ್ಮ), ಮಧ್ಯಮ (ವಾಯು), ಅಧಮ (ಕೋಣವಾಯು). |

ಮತತ್ರಯ : ದ್ವೈತ, ಅದ್ವೈತ, ವಿಶಿಷ್ಟಾದ್ವೈತ.

ಋಣತ್ರಯ : ದೇವ, ಪಿತೃ, ಋಷಿ

ತ್ರಿನಾಡಿ : ಸುಷುಮ್ನಾ, ಇಡಾ, ಪಿಂಗಳಾ.

ತ್ರಿವೇಣಿ (ನದಿ) : ಗಂಗಾ, ಯಮುನಾ, ಸರಸ್ವತೀ.

ತೇಜಸ್ತ್ರಯ : ಸೂರ್ಯ, ಚಂದ್ರ, ಅಗ್ನಿ

ಅತ್ಯಾಜ್ಯ ಕರ್ಮ : ಯಜ್ಞ, ದಾನ, ತಪಸ್ಸು

ಕರ್ಮಫಲ : ಅನಿಷ್ಟ(ನರಕ), ಇಷ್ಟ(ಸ್ವರ್ಗ), ಮಿಶ್ರ (ಸಂಸಾರ).

ಅಪರೋಕ್ಷ ಜ್ಞಾನಿಗಳು : ವಿಧಿನಿಯತರು, ಅನಿಯತರು, ಸ್ವೇಚ್ಛಾವರ್ತಿ.

ಭಗವಂತನ ಸಾಕ್ಷಾತ್ಕಾರ : ವಾಸನಾಮಯ, ಅಪರೋಕ್ಷ(ಸ್ಥೂಲ), ಬಿಂಬಾಪರೋಕ್ಷ.

ಜೀವಕೃತ ಕರ್ಮ : ನಿತ್ಯ, ನೈಮಿತ್ತಿಕ, ಕಾಮ್ಯ.

ಪರಮಧರ್ಮ : ಸ್ವವಿಹಿತವೃತ್ತಿ ಭಕ್ತಿ ಭಗವದಾರಾಧನೆ.

ಭಕ್ತಿಪ್ರಭೇದ : ಪಕ್ವಭಕ್ತಿ ಪರಿಪಕ್ವ ಭಕ್ತಿ ಅಪರಿಪಕ್ವಭಕ್ತಿ

ಫಲಗಳು : ಸಮೀಚೀನ ಜ್ಞಾನ, ಭಗವದ್ದರ್ಶನ, ಮೋಕ್ಷ

ಪರೋಕ್ಷಜ್ಞಾನ, ಅಪರೋಕ್ಷ ಜ್ಞಾನ, ನಿತ್ಯಮುಕ್ತಿ.

ಬ್ರಾ. ನಿಯತಕರ್ಮಗಳು : ದಾನ, ಯಜ್ಞ, ತಪಸ್ಸು

ಅಶುದ್ಧಾಹಾರ : ಜಾತಿದುಷ್ಟ ಆಶ್ರಮದುಷ್ಟ ನಿಮಿತ್ತದುಷ್ಟ

ಶಿಕ್ಷೆ : ಉತ್ತಮ (ಮಾತಿನಿಂದ), ಮಧ್ಯಮ (ಹಣ, ದಂಡಾದಿ), ಅಧಮ (ದೇಹದಂಡನೆ).

ತ್ರಿದಶ : **ದೇವತೆಗಳಿಗೆ** - ಬಾಲ್ಯ, ಕೌಮಾರ, ಯೌವನ.

**ಮಾನವರಿಗೆ** - ಕೌಮಾರ, ಯೌವನ, ಮುಪ್ಪು.

ತಪಸ್ತ್ರಯ : ಶಾರೀರಕ, ವಾಙ್ಮಯ, ಮಾನಸ

ಸಾತ್ವಿಕ, ರಾಜಸ, ತಾಮಸ.

ಗುರಿಸಾಧಿಸಲುಬೇಕು : ನಿರ್ವೈರ, ತಾಳ್ಮೆ ಸಮಚಿತ್ತ

| | | |
|---|---|---|
| **ಅವಮಾನದ ಕಾರಣ** | : | ಅಹಂಕಾರ, ಅವಿವೇಕ, ಅಸೂಯೆ. |
| **ಅಹಂಕಾರ ಫಲ** | : | ದುಃಖ, ಮನೋರೋಗ, ಆಪತ್ತು. |
| **ಯಜ್ಞೋಪವೀತಧಾರಣ** | : | ಉಪವೀತಿ, ನಿವೀತಿ, ಪ್ರಾಚೀನಾವೀತಿ. |
| **ಜನ್ಮ** | : | ಊರ್ಧ್ವಸ್ರೋತ (ಗಿಡ ಮರಗಳು), ತಿರ್ಯಕ್ ಸ್ರೋತ (ಪಶು ಪಕ್ಷಿಗಳು), ಅರ್ವಾಕ್ ಸ್ರೋತ (ಮಾನವರು). |
| **ದಶರಥನ ರಾಣಿಯರು** | : | ಕೌಸಲ್ಯಾ, ಸುಮಿತ್ರಾ, ಕೈಕೇಯೀ. |
| **ದುಃಖ ನಾಶಕ ಯೋಗಗಳು** | : | ಯುಕ್ತ ಆಹಾರ-ವಿಹಾರ, ಯುಕ್ತ ಪ್ರಯತ್ನ-ಕರ್ಮ, ಯುಕ್ತ ಕಾಲ ಮಲಗಿ-ಎಚ್ಚರ. |
| **ನೀತಿ ಶಾಸ್ತ್ರ ಪ್ರವರ್ತಕರು** | : | ವಿದುರ, ಶುಕ್ರ, ಚಾಣಕ್ಯ. |
| **ಗ್ರಹಣ ತ್ರಯ** | : | ಖಗ್ರಾಸ ಗ್ರಹಣ, ಖಂಡಗ್ರಹಣ, ಕಂಕಣ ಗ್ರಹಣ. |
| **ಪ್ರತಿಜ್ಞೆ (ಮೂಲ)** | : | ಸ್ವಾರ್ಥ, ಪರಾರ್ಥ, ದ್ವೇಷ |
| **ಮಂಡಲ ಬೇಕು** | : | ನೈವೇದ್ಯಕ್ಕೆ, ಪೂಜಾವಸ್ತು, ಭೋಜನದೆಲೆಗೆ |
| **ಪದಾಂಗಗಳು** | : | ಯೋಗ್ಯತೆ, ಆಕಾಂಕ್ಷಾ, ಸನ್ನಿಧಿ. |
| **ತ್ರಿವರ್ಜ್ಯವಾದವು** | : | ವಾಗ್ವಾದ, ಪರಸ್ತ್ರೀಸಂಗ, ಲೇವಾದೇವಿ. |
| **ಬೇಡವಾದವು** | : | ಸುಳ್ಳು ಹೇಳುವದು, ಹೇಡಿತನ,ಕಳ್ಳತನ, ಮೋಸಮಾಡುವುದು, ಸಾಲಗಾರ, ಚಾಡಿಕೋರತನ, ಮದ್ಯಪಾನ, ಜೂಜು, ಕಾಮುಕತೆ. |
| **ಶ್ರೇಷ್ಠದಾನಗಳು** | : | ವಿದ್ಯಾದಾನ, ಕನ್ಯಾದಾನ, ಧನದಾನ. |
| **ಬಿಡಬಾರದ್ದು** | : | ಮಾತೃಭೂಮಿ, ಮಾತೃಭಾಷೆ, ಮಾತೃಸಂಸ್ಕೃತಿ. |
| **ನಿಷಿದ್ಧ ಕರ್ಮಕರಣಗಳು** | : | ಮನಸ್ಸು ವಾಕ್ಯ (ಉಕ್ತಿ), ದೇಹಾದಿ |
| **ಅಪಾಯರಹಿತ ಧರ್ಮಾಚರಣೆ** | : | ಭಗವನ್ನಾಮಸ್ಮರಣೆ, ಅನ್ನದಾನ, ಸಜ್ಜನರ ಸಹವಾಸ |

# ನಾಲ್ಕರ ವೈಭವ

ಹುಟ್ಟಿ ಬಂದ ಸುಜೀವಿ ಬಯಸುವುದು ಚತುರ್ವಿಧವಾದ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥಗಳನ್ನು. ಇದನ್ನು ದಯಪಾಲಿಸುವವನು ಸತ್, ಚಿತ್, ಆನಂದ, ಆತ್ಮನೆಂದು ಕರೆಸಿಕೊಂಡು ಅದೇ ಆದ ಶ್ರೀಹರಿ. ಶ್ರವಣಾದಿ ಉಪಾಸನೆಗಳಿಂದ, ನಾಲ್ಕು ವೇದಗಳಿಂದ ಗೇಯನಾಗಿ, ಗಮ್ಯನಾಗಿರುವ ಭಗವಂತನು ವಿಶ್ವ, ತೈಜಸ, ಪ್ರಾಜ್ಞ, ತುರೀಯ ರೂಪಗಳಿಂದ ಜೀವರಿಗೆ ನಾಲ್ಕು ಅವಸ್ಥೆಗಳನ್ನು ಕಲ್ಪಿಸುವವನೆಂದು ತಿಳಿದು ಭಜಿಸುವುದು ಮುಕ್ತಿ ಸಾಧನವು. ಜಗತ್ತು ಭಗವಂತನ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ರೂಪಗಳಿಂದ ತುಂಬಿದ್ದು ಪಿಂಡಾಂಡವೂ ಇದರಲ್ಲಿ ಸೇರಿದೆ. ನಾಲ್ಕಾದ ವರ್ಣಗಳಲ್ಲಿ ಬಂದ ಜೀವಿ ನಾಲ್ಕು ಅವಸ್ಥಾ ಹಾಗೂ ಆಶ್ರಮಗಳಲ್ಲಿದ್ದು ಯೋಗ್ಯರೀತಿಯಲ್ಲಿ ನಾಲ್ಕು ವಿಧ ಕರ್ಮದಲ್ಲಿ ನಿಷ್ಠನಾಗಿ ನಾಲ್ಕನ್ನು ತಿಳಿದು ಸಾಧನೆಗೈದು ನಾಲ್ಕನೆಯದ್ದನ್ನು ಹೊಂದಿ ಉದ್ಧಾರವಾಗುವುದು ಕರ್ತವ್ಯವಾಗಿದೆ. ಈ ನಾಲ್ಕು ಸಂಖ್ಯೆ ನಾಕಾರುಯಾಗಿ ನಲವತ್ತಾಗಿ ಬೆಳೆದಿದೆ. ಇಲ್ಲಿ ನಾಲ್ಕರ ವೈಭವದ ವಿವಿಧತೆಯನ್ನು ಕಾಣುವ ಪ್ರಯತ್ನ ನಡೆದಿದೆ.

**ನಾರಾಯಣ (ಚತುರ್ವ್ಯೂಹರೂಪಗಳು ) :** ವಾಸುದೇವ (ಮೋಕ್ಷಪ್ರದ), ಸಂಕರ್ಷಣ, (ಲಯ) ಪ್ರದ್ಯುಮ್ನ(ಸ್ಥಿತಿ), ಅನಿರುದ್ಧ (ಸೃಷ್ಟಿ).

**ಚ.ಬ್ರಹ್ಮರ ಮುಖಗಳು** : ನಾಲ್ಕು (ನಾಲ್ಕು ವೇದಗಳ ಸಂಕೇತ)

**ಯುಗಗಳು** : ಕೃತ, ತ್ರೇತಾ, ದ್ವಾಪರ, ಕಲಿ.

**ಮೂಲ ವರ್ಣಗಳು** : ಶ್ವೇತ, ರಕ್ತ, ಪೀತ, ನೀಲ. (ಶುಕ್ಲ– ಪೀತ–ರಕ್ತ–ಕೃಷ್ಣ)

**ಅವಸ್ಥೆಗಳು** : ಜಾಗರ, ಸ್ವಪ್ನ, ಸುಷುಪ್ತಿ, ಮೂರ್ಛ, (ಮೋಹ).

**ವಿಶ್ವಾದಿ ರೂಪಗಳು** : ವಿಶ್ವ, ತೈಜಸ, ಪ್ರಾಜ್ಞ, ತುರೀಯ.

**ಆತ್ಮಾದಿ ರೂಪಗಳು** : ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ.

**ಶ್ರೀಹರಿ ಅಚಿಂತ್ಯಗುಣಗಳು** : ಸತ್, ಚಿತ್, ಆನಂದ, ಆತ್ಮ.

**ಭಗದ್ಗುಣೋಪಾಸನೆ (ಉಪಾಸ್ಯಗುಣಗಳು)** : ಸತ್, ಚಿತ್, ಆನಂದ, ಆತ್ಮ.

**ಪುರುಷಾರ್ಥಗಳು** : ಧರ್ಮ, ಅರ್ಥ, ಕಾಮ, ಮೋಕ್ಷ.

**ಮುಕ್ತಿ ಸೋಪಾನಗಳು** : ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ.

**ಭಕ್ತಿಯ ಶ್ರೇಣಿ** : ಭಕ್ತಿ, ಅತಿಭಕ್ತಿ, ಪರಿಪಕ್ವಭಕ್ತಿ, ಅತಿಪರಿಪಕ್ವಭಕ್ತಿ.

| | | |
|---|---|---|
| ಜಗತ್ತು | : | ಪರಮ ನಿತ್ಯ, ನಿತ್ಯ, ಅನಿತ್ಯ, ಪರಮಅನಿತ್ಯ. |
| ಮೋಕ್ಷಗಳು (ಮುಕ್ತಿಯಲ್ಲಿ) | : | ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ, ಸಾಯುಜ್ಯ. |
| ಸಾಧನೋಪಾಯಗಳು | : | ಶ್ರವಣ, ಮನನ, ನಿದಿಧ್ಯಾಸನ, ಧ್ಯಾನ. |
| ಪ್ರಲಯಗಳು | : | ದಿನ, ಯುಗ, ಮನು, ಬ್ರಹ್ಮ. |
| ಅವಸ್ಥಾಗಳು | : | ಬಾಲ್ಯ, ಯೌವನ, ವಾರ್ಧಿಕ್ಯ, ಮರಣ. |
| ಜೀವರಿಗಿರುವ ಅಜ್ಞಾನ | : | ಜೀವಾಚ್ಛಾದಿಕಾ, ಪರಮಾಚ್ಛಾದಿಕಾ, ಶೈವ, ಮಾಯಾ. |
| ಪೂರ್ಣತಿಥಿಗಳು | : | ಪಂಚಮಿ, ದಶಮಿ, ಪೂರ್ಣಿಮಾ, ಅಮಾವಾಸ್ಯಾ. |
| ಕೇವಲ ಪ್ರಮಾಣ | : | ಈಶ್ವರ ಜ್ಞಾನ, ಲಕ್ಷ್ಮೀಜ್ಞಾನ, ಯೋಗಿಜ್ಞಾನ, ಅಯೋಗಿಜ್ಞಾನ. |
| ಪ್ರತ್ಯಕ್ಷ ಪ್ರಮಾಣ | : | ಈಶ್ವರ, ಲಕ್ಷ್ಮೀ, ಯೋಗಿ, ಅಯೋಗಿ. |
| ಚತುರುಪಾಯಗಳು | : | ಸಾಮ, ದಾನ, ಭೇದ, ದಂಡ. |
| ಚತುರ್ವಿಧ ಅನ್ನ (ಆಹಾರ ವಿಧಗಳು) | : | ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ. |
| ವೇದಗಳು(ಸಂಹಿತಾ) | : | ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ. |
| ವೇದಗಳ ಅಧಿಪತಿ | : | ಬೃಹಸ್ಪತಿ, ಶುಕ್ರ, ಕುಜ, ಬುಧ. |
| ವೇದದವಿಭಾಗಗಳು | : | ಸಂಹಿತಾ, ಬ್ರಾಹ್ಮಣ, ಆರಣ್ಯಕ, ಉಪನಿಷತ್. |
| ಉಪವೇದಗಳು | : | ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಸ್ಥಾಪತ್ಯವೇದ |
| ಜೀವಜಾತಿ | : | ಸಜಾತಿ, ವಿಜಾತಿ, ಸಾಧಾರಣ, ವಿಶೇಷ. |
| ನಾಶಗಳು | : | ಅನಿತ್ಯತ್ವ, ದೇಹಸಾನಿ, ದುಃಖಪ್ರಾಪ್ತಿ ಅಪೂರ್ಣತಾ. |
| ಚತುರ್ವರ್ಣಗಳು | : | ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ. |
| ಕರ್ಮಗಳು | : | ಜ್ಞಾನ, ಇಚ್ಛಾ, ಕ್ರಿಯಾ, ಶಕ್ತಿ |
| ಬ್ರಹ್ಮನಚತುರರೂಪ | : | ನೃಷತು, ವರಸತು, ಹೋತಾ, ಋತುಸತು. |
| ಅನುಬಂಧಗಳು | : | ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧ. |
| ಧರ್ಮಚತುಷ್ಟಯ | : | ಸತ್ಯ, ದಯಾ, ತಪಸ್ಸು ಶೌಚ. |
| ಕರ್ಮ ಚತುಷ್ಟಯ | : | ನಿತ್ಯ, ನೈಮಿತ್ತಿಕ, ಕಾಮ್ಯ, ನಿಷಿದ್ಧ |

ಚತುರಾಶ್ರಮಗಳು : ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಸಂನ್ಯಾಸ.

ಬ್ರಹ್ಮಚರ್ಯ : ಸಾವಿತ್ರಿ, ಪ್ರಾಜಾಪತ್ಯ, ಬ್ರಾಹ್ಮ ಬೃಹತ್ (ನೈಷ್ಠಿಕ)

ಗಾರ್ಹಸ್ಥ್ಯ : ವಾರ್ತಾ, ಅಸಂಚಯ, ಶಾಲೀನ, ಶಿಲೊಂಛ

ವಾನಪ್ರಸ್ಥ : ವೈಖಾನಸ, ವಾಲಖಿಲ್ಯ, ಉದುಂಬರ, ಫೇನಪ

ಸಂನ್ಯಾಸ : ಕುಟೀಚಕ, ಬಹೂದಕ, ಹಂಸ, ಪರಮಹಂಸ

ಚತುರ್‌ಭಜಕರು : ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ.

ಚದುರಂಗ (ಸೈನ್ಯ) : ಆನೆ, ಒಂಟೆ, ಕುದುರೆ, ಕಾಲಾಳು

ಚಾತುರ್ಮಾಸ್ಯ ವ್ರತ : ಶಾಕ, ದಧಿ, ಕ್ಷೀರ, ದ್ವಿದಳ.

ಬ್ರಹ್ಮಸೂತ್ರ ಅಧ್ಯಾಯಗಳು : ಸಮನ್ವಯ, ಅವಿರೋಧ, ಸಾಧನ, ಫಲ.

ಆನಂತ್ಯಗಳು : ದೇಶತಃ, ಕಾಲತಃ, ಶಕ್ತಿತಃ, ಗುಣತಃ

ಜೀವನ ದೇಹಗಳು : ಸ್ವರೂಪದೇಹ, ಲಿಂಗದೇಹ, ಅನಿರುದ್ಧದೇಹ, ಸ್ಥೂಲದೇಹ.

ನಿಯಾಮಕ ಶ್ರೀಹರಿರೂಪ : ಶರೀರ, ಪುರುಷ, ಅನಿರುದ್ಧ ಪ್ರದ್ಯುಮ್ನ

ಹಣದ ಗತಿಗಳು : ಧರ್ಮ, ಕೀರ್ತಿ, ಸಂಪತ್ತು, ಪರೋಪಕಾರಕ್ಕೆ.

ನಾಶಕಾರಣಗಳು : ಪರದ್ರವ್ಯಾಹರಣ, ಪರಸ್ತ್ರೀಮೋಹ, ಮಿತ್ರತ್ಯಾಗ, ಅವಿವೇಕತನ.

ಕಾರ್ಯಸಿದ್ಧಿಗೆ : ಉತ್ಸಾಹ, ದಕ್ಷತೆ, ಸೋಲನ್ನೊಪ್ಪಿಕೊಳ್ಳುವುದು, ಮರುಪ್ರಯತ್ನ

ಹಿರಿಯರ ಸೇವಾ ಫಲ : ಆಯಸ್ಸು, ಕೀರ್ತಿ, ಶಕ್ತಿ, ವಿದ್ಯಾ.

ಸಧ್ಯಃ ಫಲದಾಯಕಗಳು : ದೈವಸಂಕಲ್ಪ, ಮಹಾತ್ಮರ ಪ್ರಭಾವ, ಜ್ಞಾನಿಗಳ ವಿನಯ, ಪಾಪಿಷ್ಠರ ವಿನಾಶ.

ಅಭಯಪ್ರದಗಳು : ಅಗ್ನಿಹೋತ್ರ, ಮೌನ, ಅಧ್ಯಯನ, ಯಜ್ಞ.

ಮಂತ್ರಾಲೋಚನೆಗೆ ಅನರ್ಹರು : ಅಲ್ಪಮತಿಗಳು, ಆಲಸಿಗಳು, ಅವಸರಿಗಳು, ಹೊಗಳಭಟ್ಟರು.

ಗೃಹವಾಸಕ್ಕೆ ಯೋಗ್ಯರು : ಕುಟುಂಬದ ವೃದ್ಧ, ಆಪತ್ತಿನ ಮನುಷ್ಯ, ಧನಹೀನ ಮಿತ್ರ, ಮಕ್ಕಳಿಲ್ಲದ ಸೋದರಿ.

ತಿಳಿಯಲು ಹೋಗಬಾರದ್ದು : ಋಷಿಮೂಲ, ನದಿಮೂಲ, ಮಹಾತ್ಮರಮೂಲ, ಸ್ತ್ರೀಯರ ಮೂಲ.

| | | |
|---|---|---|
| ಚತುರ್ಗಕಾರಗಳು | : | ಗೀತಾ, ಗಂಗಾ, ಗಾಯತ್ರೀ, ಗೋವಿಂದ. |
| ಧರ್ಮ ಪಾದಗಳು | : | ಸತ್ಯ, ಧರ್ಮ, ತಪಸ್ಸು ದಾನ, |
| ಅಧರ್ಮ ಪಾದಗಳು | : | ಅಸತ್ಯ, ಹಿಂಸೆ, ಚಾಂಚಲ್ಯ, ವಂಚನೆ (ಅಪ್ರಾಮಾಣಿಕತೆ) |
| ವಿದ್ಯಾನಾಶಕ ಗುಣಗಳು | : | ಅನಾಸಕ್ತಿ ಅನ್ಯಾಸಕ್ತಿ ಅಹಂಕಾರ, ಗುರುಭಕ್ತಿರಾಹಿತ್ಯ. |
| ಕಾರ್ಯಭಾಗಿಗಳು | : | ಕರ್ತಾ, ಕಾರಯಿತಾ, ಪ್ರೇರಕ, ಅನುಮೋದಕ. |
| ಕಾರ್ಯಭಾದಕಗಳು | : | ಲೋಭ, ಚಾಪಲ್ಯ, ಅಭಿಮಾನ, ನಾಸ್ತಿಕ್ಯಬುದ್ಧಿ |
| ತೀರ್ಥಸೇವನೆ ಫಲ | : | ಕಾಯಶುದ್ಧಿ ಧರ್ಮಸಾಧನ, ಆಯುಷ್ಯವೃದ್ಧಿ ಮೋಕ್ಷಪ್ರಾಪ್ತಿ |
| ಅನರ್ಥಹೇತುಗಳು | : | ಯೌವನ, ಸಂಪತ್ತು ಪ್ರಭುತ್ವ, ಅವಿವೇಕತನ. |
| ವಿದ್ಯಾಹೇತುಗಳು | : | ಗುರೂಪದೇಶ, ಸ್ವಮೇಧಾಶಕ್ತಿ ಚರ್ಚಾದಿಗಳು, ಅನುಭವ. |
| ನಮಸ್ಕಾರದ ಫಲ | : | ಆಯುಷ್ಯವೃದ್ಧಿ ವಿದ್ಯಾವೃದ್ಧಿ ಸಂಪತ್ ವೃದ್ಧಿ ಯಶೋವೃದ್ಧಿ |
| ತಮೋಯೋಗ್ಯರು | : | ದೈತ್ಯರು, ರಾಕ್ಷಸರು, ಪಿಶಾಚಿಗಳು, ಮನುಷ್ಯಾಧಮರು. |
| ಪ್ರತ್ಯಕ್ಷಪ್ರಮಾಣ | : | ಈಶ್ವರ ಪ್ರತ್ಯಕ್ಷ ಲಕ್ಷ್ಮೀಪ್ರತ್ಯಕ್ಷ ಯೋಗಿ ಪ್ರತ್ಯಕ್ಷ ಅಯೋಗಿ ಪ್ರತ್ಯಕ್ಷ |
| ವಿಷ್ಣುವಿನ ಚತುರಾಯುಧ | : | ಶಂಖ, ಚಕ್ರ, ಗದಾ, ಪದ್ಮ |
| ದಿಕ್ಕುಗಳು | : | ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ. |
| ದಿಗಭಿಮಾನಿಗಳು | : | ಇಂದ್ರ, ಯಮ, ವರುಣ, ಕುಬೇರ. |
| ಕೋಣ ದಿಕ್ಕುಗಳು | : | ಆಗ್ನೇಯ, ನೈಋತ್ಯ, ವಾಯವ್ಯ, ಈಶಾನ್ಯ. |
| ಕೋಣಾಭಿಮಾನಿಗಳು | : | ಅಗ್ನಿ ನಿರ್ಋತಿ, ವಾಯು, ಈಶಾನ. |
| ಸೃಷ್ಟಿ(1) | : | ಆತ್ಮಸೃಷ್ಟಿ ಪರಾಧೀನ ವ್ಯಾಪ್ತಿಸೃಷ್ಟಿ ಮಿಶ್ರ ಸೃಷ್ಟಿ ಕೇವಲಸೃಷ್ಟಿ |
| ಸೃಷ್ಟಿ(2) | : | ನಿತ್ಯಸೃಷ್ಟಿ ಮನುಸೃಷ್ಟಿ ದಿನಸೃಷ್ಟಿ ಮಹಾಸೃಷ್ಟಿ |
| ಲಯಗಳು | : | ನಿತ್ಯಲಯ, ಮನುಲಯ, ದಿನಲಯ, ಮಹಾಲಯ. |
| ಪ್ರಳಯಗಳು | : | ದಿನಪ್ರಲಯ, ಆತ್ಯಂತಿಕ ಪ್ರಲಯ, ಪ್ರಾಕೃತ ಪ್ರಲಯ, ನೈಮಿತ್ತಿಕ ಪ್ರಲಯ |
| ನಿರಂಶಜೀವರದಶಾಗಳು | : | ಅಜ್ಞಾನದಶಾ, ಜ್ಞಾನದಶಾ, ಅಪರೋಕ್ಷದಶಾ, ಮುಕ್ತದಶಾ. |
| ಋಣಗಳು | : | ದೇವ, ಋಷಿ, ಪಿತೃ, ಮನುಷ್ಯ. |
| ವಾಯು ಅಭಿಮನ್ಯ | : | ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ. |

ಯಜ್ಞದಲ್ಲಿರಬೇಕಾದ್ದು : ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ.

ವಿದ್ಯೆ ಲಭ್ಯ : ಗುರುಗಳಿಂದ ಕಾಲುಭಾಗ, ಮೇಧಾಶಕ್ತಿಯಿಂದ ಕಾಲುಭಾಗ, ಸಂವಾದದಿಂದ ಕಾಲು ಭಾಗ, ಅನುಭವದಿಂದ ಕಾಲು ಭಾಗ.

ವೇದ ವಿದ್ಯೆಗೆ ಬೇಕಾದ್ದು : ಋಷಿ, ದೇವತೆ, ಛಂದಸ್ಸು, ಅರ್ಥ.

ಫಲಾಪ್ರಾಪ್ತಿ ಸ್ಥಾನಗಳು : ಅಹಂಕಾರ, ಸ್ವಾರ್ಥ, ಕೀರ್ತಿ, ಪ್ರದರ್ಶನ.

ಸತ್ಕರ್ಮ ಫಲನಾಶಕ : ಸ್ನಾನವಿಲ್ಲದಾಚರಣೆ, ಯಜ್ಞೋಪವೀತರಹಿತಾಚರಣೆ, ಊರ್ಧ್ವ ಪುಂಡ್ರರಹಿತಾಚರಣೆ, ಪವಿತ್ರರಹಿತಾಚರಣೆ.

ಸ್ಥೂಲದೇಹಗಳು : ಭೂಚರ, ವಾರಿಚರ, ಖೇಚರ, ನಿಶಾಚರ.

ಜಲದ ಗುಣ : ಶಬ್ದ ಸ್ಪರ್ಶ, ರೂಪ, ರಸ.

ಶಕ್ತಿಗಳು : ಅಚಿಂತ್ಯ ಶಕ್ತಿ ಆಧೇಯ ಶಕ್ತಿ ಸಹಜ ಶಕ್ತಿ ಪದವರ್ಣಾದಿ ಶಕ್ತಿ

ಶ್ರೀನಾರಾಯಣ : ಗುಣ ಪೂರ್ಣ, ದೋಷದೂರ, ಜ್ಞೇಯ, ಗಮ್ಯ.

ಕರ್ತೃಕತ್ವ : ಅಕರ್ತೃಕತ್ವ, ಅಚೇತನಕರ್ತೃಕತ್ವ, ಜೀವಕರ್ತೃಕತ್ವ, ಈಶಕರ್ತೃಕತ್ವ.

ಚರಪ್ರಾಣಿಗಳು : ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ.

ಸಸ್ಯ ವೈವಿಧ್ಯ : ವನಸ್ಪತಿ, ವೃಕ್ಷ, ವೀರುಧ, ಓಷಧಿ.

ಮೂರ್ತಪಿತೃಗಳು : ಸುಕಾಲ, ಅಂಗೀರಸ, ಸುಸ್ವಧ, ಸೋಮಪ.

ವೈಶ್ವದೇವ (ಮಾಡಬಹುದಾದ) : ಅನ್ನದಿಂದ, ಅಕ್ಕಿಯಿಂದ, ನೀರಿನಿಂದ, ಮನಸ್ಸಿನಿಂದ

ಜೀವಿಕೆ ವೃತ್ತಿಗಳು : ಆನ್ವೀಕ್ಷಕೀ, ತ್ರಯೀ, ವಾರ್ತಾ, ದಂಡನೀತಿ

ಜೂಜಿನದುಷ್ಫಲ : ಪಾಪಪ್ರಾಪ್ತಿ ಕುಲನಾಶ, ಕೀರ್ತಿನಾಶ, ದುಃಖಪ್ರಾಪ್ತಿ

ಅರ್ಥವ್ಯಯ (ಸಮಪ್ರಮಾಣ) : ಹಿಂದಿನದ್ದು ತೀರಿಸಲು (ಹಿರಿಯರಿಗಾಗಿ), ಸಾಲಕೊಡಲು (ಮುಂದಿನವರಿಗಾಗಿ) ಗುಪ್ತನಿಧಿ (ದಾನಧರ್ಮಾದಿಗಳಿಗೆ), ಸಂಸಾರ (ನಿತ್ಯ ಜೀವನಕ್ಕೆ).

ಅರ್ಥವಾದ : ಸ್ತುತಿ, ನಿಂದ, ಪರಕೃತಿ, ಪರಾಕೃತಿ.

ಶಬ್ದಗಳ ಪ್ರಕಾರ : ಅನ್ಯತ್ರೈವಪ್ರಸಿದ್ಧ ಉಭಯತ್ರ ಪ್ರಸಿದ್ಧ ಅನ್ಯತ್ರ ಪ್ರಸಿದ್ಧ ಅತ್ರ ಪ್ರಸಿದ್ಧ ಅನ್ಯತ್ರ ಪ್ರಸಿದ್ಧ ನಾಮಾತ್ಮಕ ಶಬ್ದ, ಅನ್ಯತ್ರ ಪ್ರಸಿದ್ಧ ಲಿಂಗಾತ್ಮಕ ಶಬ್ದ

| | | |
|---|---|---|
| | | ಉಭಯತ್ರ ಪ್ರಸಿದ್ಧ ನಾಮಲಿಂಗಾತ್ಮಕಶಬ್ದ ಅನ್ಯತ್ರೈವ ಪ್ರಸಿದ್ಧ ನಾಮಲಿಂಗಾತ್ಮಕ ಶಬ್ದ |
| **ಸಂಸ್ಕಾರಗಳು** | : | ವೇಗ, ಭಾವನಾ, ಯೋಗ್ಯತಾ, ಸ್ಥಿತಸ್ಥಾಪಕ |
| **ಬಲೆಗಳು (ಮನುಷ್ಯರಿಗೆ)** | : | ಸಾಲ, ವ್ಯಸನ, ಜೂಜು, ಕಾಮ. |
| **ಕರ್ಮಚತುಷ್ಟಯ** | : | ನಿತ್ಯ, ನೈಮಿತ್ತಿಕ, ಕಾಮ್ಯ, ನಿಷಿದ್ಧ. |
| **ಧರ್ಮಕ್ಕೆ ಬೇಕಾದ್ದು** | : | ಜಪ, ಧ್ಯಾನ, ಹೋಮ, ದಾನ (ಪೂಜಾದಿ) |
| **ಮೋಕ್ಷಕ್ಕೆ ಬೇಕು** | : | ಬ್ರಹ್ಮಚರ್ಯ, ತಪಸ್ಸು (ಭಕ್ತಿ), ಶಾಸ್ತ್ರಜ್ಞಾನ, ಆಸ್ತಿಕ್ಯಬುದ್ಧಿ. |
| **ವಿದ್ಯೆ ಉಳಿಯಲು** | : | ತಪಸ್ಸು ಅಧ್ಯಯನ, ಇಂದ್ರಿಯನಿಗ್ರಹ, ಸತ್ಕರ್ಮಾನುಷ್ಠಾನ. |
| **ಯೋಗಿಗಳು** | : | ಭಕ್ತಿಯೋಗಿ, ವಿಜ್ಞಾನಯೋಗಿ, ಜ್ಞಾನಯೋಗಿ, ಕರ್ಮ ಯೋಗಿ. |
| **ವಿನಾಶಗಳು** | : | ಶರೀರನಾಶ, ಸ್ವರೂಪನಾಶ, ದುಃಖಪ್ರಾಪ್ತಿ ಅಪೂರ್ಣತಾ. |
| **ಜೀವಧರ್ಮಗಳು** | : | ಅಲ್ಪಜ್ಞತ್ವ, ಅಲ್ಪಶಕ್ತಿ ಪಾರತಂತ್ರ್ಯ, ಅಪೂರ್ಣತಾ. |
| **ಶ್ರೇಷ್ಠಗುಣಗಳು** | : | ಪ್ರಾಣಿದಯಾ, ದಾನ, ಸ್ನೇಹ, ಪ್ರಿಯಭಾಷಣ. |
| **ಮೋಹ ಮದ್ಯಗಳು** | : | ಗೌಡಿ, ಮಾಧ್ವಿ, ಪೈಷ್ಟಿ ಸ್ತ್ರೀ. |
| **ಸನಕಾದಿಗಳು** | : | ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ. |
| **ಧನದ ದಾಯಾದಿಗಳು** | : | ಧರ್ಮ, ಅಗ್ನಿ ನೃಪ, ಕಳ್ಳ. |
| **ಪ್ರದಕ್ಷಿಣೆಯ ಅಂಗಗಳು** | : | ಹೆಜ್ಜೆ ಹೆಜ್ಜೆ ಅಚಲಿತ ಕೈಗಳು, ಜಿಹ್ವೆಯಲ್ಲಿ ಸ್ತುತಿ, ಹೃದಯದಿ ಧ್ಯಾನ |
| **ಕೇವಲ ಪ್ರಮಾಣ** | : | ಈಶ್ವರಜ್ಞಾನಂ, ಲಕ್ಷ್ಮೀಜ್ಞಾನಂ, ಯೋಗಿಜ್ಞಾನಂ, ಅಯೋಗಿ ಜ್ಞಾನಂ. |
| **ಅನುಮಾನದೋಷಗಳು** | : | ವಿರೋಧ, ಅಸಂಗತಿ, ನ್ಯೂನತಾ, ಆಧಿಕ್ಯ, |
| **ದೋಷಗಳು** | : | ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಅನವಸ್ಥಾ ಚಕ್ರಕಾಶ್ರಯ |
| **ಬೌದ್ಧರ ವಿಭಾಗ** | : | ಸೌತ್ರಾಂತಿಕ, ವೈಭಾಷಿಕರು, ಮಾಧ್ಯಮಿಕರು, ವಿಜ್ಞಾನವಾದಿಗಳು |
| **ಲಯ** | : | ನಿತ್ಯಲಯ, ಮನುಲಯ, ದಿನಲಯ, ಮಹಾಲಯ. |

# ಐದರ ವೈಭವ

ಮಾನವರ ಸಾಧನಶರೀರ ಪಾಂಚಭೌತಿಕವಾದದ್ದು. ಪ್ರಪಂಚ ಬೆಳೆದದ್ದೂ ಇದರಿಂದಲೆ. ಕಡೆಗೆ ಲೀನವಾಗುವುದೂ ಇದರಲ್ಲೆ. ಪಂಚಭೇದಗಳಿಂದ ಕೂಡಿದ ಈ ಜಗತ್ತಿನಲ್ಲಿ ಭಗವಂತ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಹೀಗೆ ಪಂಚಾತ್ಮಕನಾಗಿ ತುಂಬಿರುವ. ಐದು ಎಂದಾಗ ಸಾಮಾನ್ಯವಾಗಿ ನೆನಪಾಗುವುದು ಪಂಚಪಾಂಡವರು, ಪಂಚೇಂದ್ರಿಯಗಳು, ಪಂಚಪ್ರಾಣರು, ಪಂಚಕೋಶಗಳು, ಪಂಚಾಮೃತ, ಪಂಚಗವ್ಯ, ಪಂಚಕನ್ಯೆಯರು, ಪಂಚಭಕ್ಷ್ಯ, ಪಂಚತಂತ್ರ, ಪಂಚಾಂಗ ಮುಂತಾದವು. ಆದರೆ ಈ ಐದು ಸಂಖ್ಯೆಯ ವ್ಯಾಪ್ತಿ ಬಹುದೊಡ್ಡದಾಗಿದೆ. ತಿಳಿಯುವ ಮನಸ್ಸಿದ್ದಲ್ಲಿ ಭಗವಂತನ ಸಂಖ್ಯಾ ವೈಚಿತ್ರವನ್ನು ಕಾಣಬಹುದು. ಇಲ್ಲಿ ಕೆಲವನ್ನು ತಿಳಿಸುವ ಪ್ರಯತ್ನ ಇದೆ.

**ಪಂಚಭಗವದ್ರೂಪಗಳು** : ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ.

**ಪಂಚ ಪತ್ನಿಯರು** : ಶಾಂತ, ಕೃತಿ, ಜಯಾ, ಮಾಯಾ, ಲಕ್ಷ್ಮೀ.

**ಪಂಚಭೇದಗಳು** : ಜೀವೇಶ್ವರಭೇದ, ಜೀವಜಡಭೇದ, ಜೀವಜೀವ ಭೇದ, ಜಡೇಶ್ವರಭೇದ, ಜಡಜಡಭೇದ.

**ಮುಕ್ತಿಯೋಗ್ಯರು** : ದೇವ, ಋಷಿ, ಪಿತೃ, ರಾಜರು, ಮನುಷ್ಯೋತ್ತಮರು.

**ಮುಕ್ತಿಯೋಗ್ಯರು** : ಸಾಂಶರು, ನಿರಂಶರು, ಶುಭ್ರವರ್ಣರು, ಭಕ್ತಿ ಸಂಪನ್ನರು, ನಿಶ್ಚಿತ ಜ್ಞಾನಿಗಳು.

**ಮುಕ್ತಸ್ಥಾನ (ಪದವಿಗಳು)** : ಸಾಮೀಪ್ಯ, ಸಾಲೋಕ್ಯ, ಸಾರೂಪ್ಯ, ಸಾಯುಜ್ಯ, ಸಾರ್ಷ್ಟಿ.

**ಪಂಚಕೋಶಗಳು** : ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ.

**ಕೋಶಪ್ರಾಣರೂಪಗಳು** : ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ.

**ಉಪಪ್ರಾಣರು** : ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ.

**ಕೋಶ ಭಗವದ್ರೂಪಗಳು** : ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ.

**ಪಂಚಮುದ್ರೆಗಳು** : ಚಕ್ರ, ಶಂಖ, ಗದಾ, ಪದ್ಮ, ನಾರಾಯಣ.

**ಪಂಚರೂಪಗಳು (ಉಲ್ಕಗಳು)** : ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯೂಲ್ಕ, ಸಹಸ್ರೋಲ್ಕ.

**ಅಸ್ವತಂತ್ರರು** : ಮುಕ್ತರು, ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು, ತಾಮಸರು, ತಮೋಯೋಗ್ಯರು.

**ಜಗತ್ತು** : ಪರಾತ್ಪರನಿತ್ಯ, ಪರಮನಿತ್ಯ, ನಿತ್ಯ, ಅನಿತ್ಯ, ಪರಮಾನಿತ್ಯ.

ಪಂಚಪ್ರಾಣರೂಪಗಳು : ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ.

ಪಂಚಮಹಾಪಾತಕಗಳು : ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನಿಗಮನ, ಇವರ ಸಹವಾಸ.

ಸಂವತ್ಸರಗಳು : ಸಂವತ್ಸರ, ಪರಿವತ್ಸರ, ಇಡಾವತ್ಸರ, ವತ್ಸರ, ಅನುವತ್ಸರ.

ಪಂಚಾಂಗ : ತಿಥಿ, ವಾರ, ನಕ್ಷತ್ರ, ಯೋಗ, ಕರಣ.

ಪಂಚಭೂತಗಳು : ಪೃಥಿವಿ, ಅಪ್ಪು, ತೇಜ, ವಾಯು, ಆಕಾಶ.

ಪಂಚಜ್ಞಾನೇಂದ್ರಿಯಗಳು : ಶ್ರೋತ್ರ, ಚಕ್ಷು, ತ್ವಕ್, ಜಿಹ್ವೆ, ನಾಸಿಕ.

ಪಂಚ ಕರ್ಮೇಂದ್ರಿಯಗಳು : ವಾಕ್, ಪಾಣಿ, ಪಾದ, ಗುದ, ಉಪಸ್ಥ.

ಪಂಚತನ್ಮಾತ್ರಗಳು : ಶಬ್ದ, ಸ್ಪರ್ಶ, ರೂಪ, ರಸ, ಗಂಧ.

ಪಂಚ ಯಜ್ಞಗಳು : ದೇವ, ಋಷಿ, ಪಿತೃ, ಅತಿಥಿ, ಭೂತ.

ಪಂಚಮಹಾಯಜ್ಞಗಳು : ದೇವಯಜ್ಞ, ಋಷಿಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತ ಯಜ್ಞ.

ಪಂಚಾಮೃತ (ಮಿಶ್ರಣ) : ಹಾಲು, ಮೊಸರು, ತುಪ್ಪ, ಮಧು, ಸಕ್ಕರೆ.

ಪಂಚಾಮೃತಾಭಿಮಾನಿಗಳು : ಗೋವಿಂದ, ವಾಮನ, ವಿಷ್ಣು, ಮಧುಸೂದನ, ಅಚ್ಯುತ.

ಪತ್ನಿಯರು : ಪದ್ಮಾ, ವೃಷಾಕಪಿ, ಕಮಲಾಲಯಾ, ಪದ್ಮಿನಿ, ಸುಗಂಧೀ.

ಪಂಚಗವ್ಯ : ಗೋಕ್ಷೀರ, ಗೋದಧಿ, ಗೋಘೃತ, ಗೋಮೂತ್ರ, ಗೋಮಯ.

ಪಂಚಸಂಸ್ಕಾರಗಳು : ತಾಪ, ಪುಂಡ್ರ, ನಾಮ, ಯಾಗ, ಯೋಗ.

ಊರ್ಧ್ವ ಪುಂಡ್ರಗಳು (ಧಾರಣೆಗೆ) : ಉದಕ, ಮೃತ್ತಿಕ, ಗೋಪೀಚಂದನ, ಗಂಧ, ಅಂಗಾರ.

ಪಂಚ ಪರ್ವಗಳು : ಅಜ್ಞಾನ, ಮಿಥ್ಯಾಜ್ಞಾನ, ಮಮತಾ, ಅಹಂಕಾರ, ಅಹಂಭಾವ.

ಪಂಚಾಗ್ನಿಗಳು : ಆಕಾಶಾಗ್ನಿ, ಪರ್ಜನ್ಯಾಗ್ನಿ, ಪೃಥ್ವ್ಯಾಗ್ನಿ, ಪುರುಷಾಗ್ನಿ, ಯೋಷಾಗ್ನಿ.

ಪಂಚಾಗ್ನಿಗಳು : ಆವಹನೀಯ, ಗಾರ್ಹಸ್ಪತ್ಯ, ದಕ್ಷಿಣಾಗ್ನಿ, ಆವಸಥ್ಯ, ಸಭ್ಯ.

ಪಂಚ ಕ್ಷೀರವೃಕ್ಷಗಳು : ವಟ, ಜಂಬೂ, ಪ್ಲಕ್ಷ, ಅಶ್ವತ್ಥ, ಮಾವು.

ಸುಷುಮ್ನಾನಾಡಿ ಪ್ರಭೇದಗಳು : ವಜ್ರಿಕಾ, ಆರ್ಯಾ, ಅವಭಾಸಿನೀ, ವೈದ್ಯುತಾ, ಬ್ರಹ್ಮನಾಡಿ.

ನಾಡಿಗಳ ಬಣ್ಣ : ಹಳದಿ, ನೀಲಿ, ಬಿಳಿ, ಪಿಂಗಳ, ಕೆಂಪು.

ನಾಡಿಗತ ದೇವತೆ : ಪ್ರದ್ಯುಮ್ನ, ಅನಿರುದ್ಧ, ವಾಸುದೇವ, ಸಂಕರ್ಷಣ, ನಾರಾಯಣ.

ಮುಖಗಳ ವರ್ಣ : ವಿದ್ಯುತ್, ಬಿಳಿ, ಕಪ್ಪು, ಕೆಂಪು, ಶ್ಯಾಮ.

ರುದ್ರನ ಪಂಚಮುಖಗಳು : ತತ್ಪುರುಷ, ಸದ್ಯೋಜಾತ, ಅಘೋರ, ವಾಮದೇವ, ಈಶಾನ.

ಪಂಚ ಪ್ರಾಣಗಳು : ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ.

ಭಾರತೀರೂಪಗಳು : ದ್ಯು, ಕ್ಷಿತಿ, ದಿಜ್, ವಾಜ್, ವಿದ್ಯುತ್.

ಪಂಚ ಋತುಗಳು : ವಸಂತ, ಗ್ರೀಷ್ಮ ವರ್ಷ, ಶರತ್ + ಹೇಮಂತ, ಶಿಶಿರ.

ನಿಯಾಮಕರು : ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ, ವಾಸುದೇವ, ನಾರಾಯಣ.

ಪಂಚ ಸಂವತ್ಸರಗಳು : ಚಾಂದ್ರ, ಸೌರ, ಸಾವರ, ನಾಕ್ಷತ್ರ, ಬಾರ್ಹಸ್ಪತ್ಯ.

ಪಂಚವರ್ಣಗಳು : ಶ್ವೇತ, ಪೀತ, ರಕ್ತ ಹರಿತ, ಕೃಷ್ಣ

ಪಂಚಕನ್ಯೆಯರು : ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ.

ಪಂಚಜೀವಪಥ : ಆಕಾಶ, ಪರ್ಜನ್ಯ, ಧರಾ, ಪುಂ, ಸ್ತ್ರೀ.

ವೇದಪಾಠಕ್ರಮಗಳು : ಸಂಹಿತಾಪಾಠ, ಪದಪಾಠ, ಕ್ರಮಪಾಠ, ಜಟಾಪಾಠ, ಘನಪಾಠ.

ಅಧಿಕರಣಾಂಗಗಳು : ವಿಷಯ, ವಿಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನ.

ಪಂಚಾಂಗ ಸ್ನಾನ : ಸಂಕಲ್ಪ ಪಠನ, ಮಾರ್ಜನ, ಅಘಮರ್ಷಣ, ಮಹಾಸ್ನಾನ.

ಪಂಚಸೂಕ್ಷ್ಮ ಲಕ್ಷಣ : ತೊಗಲು, ಕೂದಲು, ಬೆರಳು, ಹಲ್ಲು, ಬೆರಳಿನಲ್ಲಿನ ರೇಖೆಗಳು.

ಪಂಚಪಾಂಡವರು : ಧರ್ಮರಾಜ, ಭೀಮಸೇನ, ಅರ್ಜುನ, ನಕುಲ, ಸಹದೇವ.

ದ್ರೌಪದೀ ಅಂತರ್ಗತ ದೇವತೆಗಳು : ಶ್ಯಾಮಲಾ, ಭಾರತೀ, ಶಚೀ, ಉಷಾ, ಪಾರ್ವತಿ.

ಉಪಪಾಂಡವರು (ದ್ರೌಪದೇಯರು) : ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಕರ್ಮ.

ಉಪಪಾಂಡವರ ಮೂಲರೂಪ (ಗಂಧರ್ವರು) : ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲ.

ಮಂಗಳಾರತಿ ಬತ್ತಿಳ ನಿಯಾಮಕರು : ಪ್ರದ್ಯುಮ್ನ ಅನಿರುದ್ಧ ಸಂಕರ್ಷಣ, ವಾಸುದೇವ, ನಾರಾಯಣ.

ದೇವಪೂಜಾ ಪ್ರತೀಕ (ಕನಿಷ್ಠ) : ಸಾಲಿಗ್ರಾಮ, ಕೃಷ್ಣಪ್ರತಿಮೆ, ಸುದರ್ಶನ, ಚಕ್ರಾಂಕಿತ, ವಿಷ್ಣುಪಾದ.

ಮನೋವೃತ್ತಿಗಳು (ಅಂತಃಕರಣ) : ಮನಸ್ಸು ಬುದ್ಧಿ ಅಹಂಕಾರ, ಚಿತ್ತ, ಚೇತನ (ಸಾಕ್ಷಿ).

ಅಭಿಮಾನಿಗಳು : ರುದ್ರ, ಸರಸ್ವತಿ, ಶೇಷ, ಲಕ್ಷ್ಮೀ, ಶ್ರೀಹರಿ.

ಪಂಚಾಗ್ನಿಗಳು : ಆಕಾಶ, ಉದಕ, ಭೂಮಿ, ಪಿತಾ, ಮಾತಾ.

ಜೀವಪಂಚಕರು : ದೇವ, ಋಷಿ, ಪಿತೃ, ಮನುಷ್ಯ, ದಾನವ.

ವಿದ್ಯಾ ಪಂಚಕ : ಜ್ಞಾನ, ವಿಜ್ಞಾನ, ಕ್ರೋಧ, ನಾದ, ಸುಹೃತ್ವ.

**ಕುವಿದ್ಯಾಪಂಚಕ (ತಮಸ್ಸುಗಳು)** : ತಮ, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ.

**ದೈತ್ಯ ಪಂಚಕ** : ಕಲಿ, ಅಂಧಕಾಸುರ, ಮಧುಕೈಟಭ, ವಿಪ್ರಚಿತ್ತಿ ಶಂಬರ.

**ಪಂಚಸೂನು ದೋಷ** : ಖಂಡನೀ, ಪೇಕ್ಷಿಣೀ, ಚುಲ್ಲಿ ಜಲಕಂಭ,ಭರ್ಜನ.

**ಪಂಚಧ್ವನಿಗಳು** : ನಗಾರಿ (ಕೋಲಿನಿಂದ), ಮೃದಂಗ (ಕೈಯಿಂದ), ವೀಣೆ (ತಂತಿ), ತಾಳ (ಅನ್ಯೋನ್ಯ), ಕೊಳಲು (ಮುಖವಾಯು).

**ಶ್ರೇಷ್ಠ 'ಜ' ಕಾರಗಳು** : ಜನಾರ್ದನ, ಜನನಿ, ಜನ್ಮಭೂಮಿ, ಜಾನ್ಹವಿ, ಜನಕ.'

**ತೃಪ್ತಿಪಡಿಸಲಾಗದ 'ಜ'ಕಾರಗಳು** : ಜಾಮಾತಾ, ಜಾಯಾ, ಜಾತವೇದ, ಜಠರ, ಜರ್ಜರಿತ.

**ಪವಿತ್ರ 'ಗ' ಕಾರಗಳು** : ಗಂಗಾ, ಗೀತಾ, ಗಾಯತ್ರೀ, ಗೋವು, ಗೋವಿಂದ.

**ವಿದ್ಯೆಗೆ ಬೇಡದ 'ಅ' ಕಾರಗಳು** : ಅನಾಸಕ್ತಿ ಅನ್ಯಾಸಕ್ತಿ ಅಹಂಕಾರ, ಆಲಸ್ಯ, ಅಭಕ್ತಿ (ಗುರು ಹಿರಿಯರಲ್ಲಿ).

**ಬೇಕಾದ 'ವ' ಕಾರಗಳು** : ವಸ್ತ್ರ ವಪು (ಆರೋಗ್ಯಶರೀರ), ವಾಕ್ (ಚತುರಮಾತು), ವಿದ್ಯಾ (ಯೋಗ್ಯವಿದ್ಯಾ), ವಿನಯ.

**ಪಂಚಭಕ್ಷ್ಯಗಳು** : ಅಪೂಪ, ಮೋದಕ, ವಡೆ, ಹೋಳಿಗೆ, ಲಾಡು.

**ಮಾನ್ಯಸ್ಥಾನಗಳು** : ವಿದ್ಯಾ (ಆಧ್ಯಾತ್ಮ ವಿದ್ಯಾ), ಕರ್ಮ (ಸತ್ಕರ್ಮಾಚರಣೆ), ವಯಸ್ಸು ಬಂಧು (ಸಜ್ಜನರು), ವಿತ್ತ(ಶುದ್ಧಸಂಪತ್ತು).

**ಶುದ್ಧಿಗಳು** : ಆತ್ಮಶುದ್ಧಿ ಸ್ಥಾನಶುದ್ಧಿ ಮಂತ್ರಶುದ್ಧಿ ದ್ರವ್ಯಶುದ್ಧಿ ದೇಹಶುದ್ಧಿ

**ಪಿತೃಸ್ಥಾನೀಯರು** : ಅನ್ನದಾತ, ಭಯತ್ರಾತ, ವಿದ್ಯಾದಾತ, ದೇಹದಾತ, ಉಪನಯನ ಮಾಡಿದವ.

**ಗೌರವವೃದ್ಧರು** : ವಿದ್ಯಾವೃದ್ಧ ವಯೋವೃದ್ಧ, ಆಚಾರವೃದ್ಧ ಧೀವೃದ್ಧ ಬಂಧುವೃದ್ಧ

**ದುರ್ಲಭವಾದವು** : ಅಹಂಕಾರರಹಿತ ಜ್ಞಾನ, ಪ್ರಿಯಮಾತಿನ ದಾನ, ಅಭಿಮಾನದ ಮಾತು, ತ್ಯಾಗದ ಐಶ್ವರ್ಯ, ಕ್ಷಮೆಯ ಶೌರ್ಯ.

**ಸುಳ್ಳು ಹೇಳಬಹುದಾದ ಪ್ರಸಂಗ** : ಹಾಸ್ಯಕ್ಕಾಗಿ, ಸ್ತ್ರೀಯರಲ್ಲಿ ಪ್ರಾಣಾಪಾಯದಲ್ಲಿ ವಿವಾಹಾದಿ ಪ್ರಸಂಗ, ಧನಾಪಹಾರ ಪ್ರಸಂಗ.

**ಪೂಜಾರ್ಹರು** : ತಾಯಿ, ತಂದೆ, ಯಜ್ಞ, ಗುರು, ಭಗವಂತ.

**ಪೂಜಾರ್ಹರು** : ದೇವತೆಗಳು, ಪಿತೃದೇವತೆಗಳು, ಉತ್ತಮ ಮನುಷ್ಯರು, ಸಂನ್ಯಾಸಿ ಗಳು, ಅತಿಥಿಗಳು.

ವೃಷ್ಟಿ ಪಂಚಕ : ಪುರೋವಾತ, ಮೇಘ, ವರ್ಷ, ವಿದ್ಯೋತ, ಉದ್ಗೃಹ್ಣ

ಭಗವದ್ರೂಪ : ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ

: ಪ್ರದ್ಯುಮ್ನ, ವಾಸುದೇವ, ನಾರಾಯಣ, ಅನಿರುದ್ಧ ಸಂಕರ್ಷಣ.

ಸೂನಾದೋಷಗಳು : ಕುಟ್ಟುವುದು, ಬೀಸುವುದು, ರುಬ್ಬುವುದು, ಕರಿಯುವುದು, ಕತ್ತರಿಸುವುದು.

ಬೇಡದ ಸಂತಾಪಗಳು : ರೂಪ, ಬಲ, ಜ್ಞಾನ, ಶೋಕ, ವ್ಯಾಧಿ.(ಕೆಲವು ಪ್ರಸಂಗದಲ್ಲಿ)

ಸಹವಾಸಾನರ್ಹರು : ಒಡಕನ್ನುಂಟುಮಾಡುವವ, ಆಸೆಬುರುಕ, ನಾಚಿಕೆಗೆಟ್ಟವ, ಕಾಮುಕ, ಪಾಪಿಷ್ಠ

ಅತಿಭೋಜನದ ಹಾನಿ : ಅನಾರೋಗ್ಯ, ಅನಾಯುಷ್ಯ, ಅಸ್ವರ್ಗ್ಯ, ಅಪುಣ್ಯ, ಹಾಸ್ಯಾಸ್ಪದ.

ಮಹಾಭಾರತದ ಪಂಚರತ್ನಗಳು : ಭಗವದ್ಗೀತಾ, ವಿಷ್ಣುಸಹಸ್ರನಾಮ, ಭೀಷ್ಮಸ್ತವರಾಜ, ಅನುಸ್ಮೃತಿ, ಗಜೇಂದ್ರಮೋಕ್ಷ

ದುಸ್ವಪ್ನನಾಶಕವಾದವು : ಶ್ರೀರಾಮನಾಮ, ಸುಬ್ರಹ್ಮಣ್ಯ, ಹನೂಮಂತ, ವೈನತೇಯ, ವೃಕೋದರ (ಭೀಮಸೇನ).

ತಾಯಿ ಸಮಾನರು : ಜನ್ಮ ಕೊಟ್ಟ ತಾಯಿ, ಅತ್ತೆ ಗುರುಪತ್ನಿ, ಮಿತ್ರಪತ್ನಿ, ರಾಜಪತ್ನಿ

ಸ್ಪರ್ಶದ ಗುಣ : ಮೃದುತ್ವ, ಕಠಿಣತ್ವ, ಶೀತತ್ವ, ಉಷ್ಣತ್ವ, ವಾಯು.

ನಿದ್ರಾಹೀನತೆಗೆ ಕಾರಣಗಳು : ಅಸಹಾಯಕನಾದದ್ದು ಬಲವಂತನನ್ನು ಎದುರು ಹಾಕಿಕೊಂಡದ್ದು ಸಂಪತ್ತುನಾಶ, ಕಾಮುಕತನ, ಕಳ್ಳತನ.

ದೇಹಗತ ಪ್ರ. ನಾಡಿಗಳು : ಸುಷುಮ್ನಾ ವಜ್ರಿಕಾ, ಇಡಾ, ಪ್ರಕಾಶಿನೀ, ಪಿಂಗಳಾ.

ಪಂಚೋಪಚಾರಗಳು : ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ.

ಪಂಚೋಪಚಾರಗಳು : ಗಂಧ, ಪುಷ್ಪ ಧೂಪ, ದೀಪ, ನೈವೇದ್ಯ.

ಅವಸ್ಥೆಗಳು : ಜಾಗ್ರತ್, ಸ್ವಪ್ನ ಸುಷುಪ್ತಿ ಮೋಹ (ಮೂರ್ಛಾ), ತುರೀಯ.

ಅವಿದ್ಯೆಗಳು : ಅಜ್ಞಾನ, ಭ್ರಾಂತಿ, ಆಗ್ರಹ, ಕ್ರೋಧ, ಮರಣ.

ಸುಳ್ಳಿಗೆ ಅವಕಾಶ : ಹಾಸ್ಯಾದಿ ಪ್ರಸಂಗ, ಅಪಾರ್ಥ ಕಲ್ಪಿಸದ್ದು (ವಿಶೇಷವಾಗಿ ಸ್ತ್ರೀಯ ರಲ್ಲಿ), ವಿವಾಹಾದಿ ಸತ್ಕಾರ್ಯ, ಮನನೋಯಿಸದಂತಹದ್ದು ಪ್ರಾಣ–ಆಪತ್ಕಾಲದಲ್ಲಿ.

ಉಪಾಸನಾ (ದ್ವಾರಗಳು) : ಅಗ್ನಿ ಆದಿತ್ಯ, ವಾಯು, ಪ್ರತಿಮಾ, ಬ್ರಾಹ್ಮಣ (ಜ್ಞಾನಿ).

